# ಸಿದ್ಧಗಂಗಾ



ಹರದನಹಳ್ಳಿ ಅಮೃತೇಶ್ವರ ದಿವ್ಯಲಿಂಗೇಶ್ವರ ದೇವಾಲಯದ ಮಹಾದ್ವಾರ.

ಫೆಬ್ರವರಿ 1981

# ಸಿದ್ಧಗಂಗಾ

ಸಂಪುಟ–೧೭ ಸಂಚಿಕೆ - ೨ ಫೆಬ್ರವರಿ, ೧೯೮೧

§ § §

**ಭವಾಂಬೋಧಿನಾವಂ ಸದಾಶುದ್ಧಭಾವಂ**
**ಶಿವಂ ಶಾಂತಮೇಕಂ ಪರಿತ್ರಾತಲೋಕಂ ।**
**ಶಿವಾನಂದಲಿಂಗಂ ಶಿವಾದ್ವೈತಲಿಂಗಂ**
**ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥**

§ § §

ನಾನು ಆರಂಭವ ಮಾಡುವೆನಯ್ಯ
ಗುರು ಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯ
ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯ
ಜಂಗಮದಾಸೋಹಕ್ಕೆಂದು,
ನಾನಾವಾವ ಕರ್ಮಂಗಳ ಮಾಡಿದರೆಯೂ
ಆ ಕರ್ಮಫಲಭೋಗವ ನೀ ಕೊಡುವೆ
ಎಂಬುದ ನಾನು ಬಲ್ಲೆನು.
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ
ಮತ್ತೊಂದು ಕ್ರಿಯೆ ಮಾಡೆನು.
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ!
ಕೂಡಲ ಸಂಗಮದೇವಾ.

—**ಬಸವಣ್ಣನವರು**

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ವಾಕ್ ಮತ್ತು ಅರ್ಥ - ಇವೆರಡನ್ನೂ ಸೇರಿಸಿ ಮಾತು ಎನ್ನುತ್ತಾರೆ. ಇವೆರಡಕ್ಕೂ ಅವಿನಾಭಾವಸಂಬಂಧವಿದೆ. ಅಂದರೆ ವಾಕ್ಕನ್ನು ಬಿಟ್ಟು ಅರ್ಥವಿರಲಿಕ್ಕಿಲ್ಲ. ಇಂಥ ಈ ಮಾತು ದೈವೀವರ ಬಲ್ಲವರ ಮಾತು ಇದು. ಮಾತುಗಾರಿಕೆ ಒಂದು ಕಲೆ. ಆ ಕಲೆಯನ್ನು ಅಭ್ಯಾಸಮಾಡಿ ಸ್ವಾಧೀನಪಡಿಸಿಕೊಳ್ಳಬೇಕು. ಈ ಅಭ್ಯಾಸ ಬಹಳ ಚಿಕ್ಕಂದಿನಿಂದಲೂ ನಡೆಯಬೇಕು ಮಾತು ಆದಷ್ಟು ಮಿತವಾಗಿರಬೇಕು. ಮಾತುಮಿತವಾದಷ್ಟೂ, ಹೆಚ್ಚು ಅರ್ಥವುಳ್ಳದ್ದಾಗುತ್ತದೆ ಭಾವವುಳ್ಳದ್ದಾಗುತ್ತದೆ. ಇದು ದೊಡ್ಡವರ ಸಂದೇಶ ಅನೇಕ ಮಹಾತ್ಮರ ಜೀವನವನ್ನು ಅವಲೋಕನ ಮಾಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಮಹಾತ್ಮ ಗಾಂಧೀಜಿಯವರು ವಾರಕ್ಕೊಮ್ಮೆ ಮೌನವನ್ನಾಚರಿಸುತ್ತಿದ್ದರು. ಯಾವಾಗ ಮಾತು ಮೌನವನ್ನವಲಂಬಿಸುತ್ತದೆಯೋ ಆಗ ಅದು ಹೆಚ್ಚು ವಿಚಾರಶಕ್ತಿಯುಳ್ಳದ್ದಾಗುತ್ತದೆ. ಹೀಗೆ ವಿಚಾರಶಕ್ತಿ ಬೆಳೆದಾಗ. ಮಾತು-ಕೃತಿಗಳಲ್ಲಿ ಏಕತೆಯುಂಟಾಗುತ್ತದೆ. ಹಾಗೂ ಆ ಮಾತು ಸೂತ್ರಪ್ರಾಯವಾಗುತ್ತದೆ. ಇಂಥ ಮಾತಿನ ಸಿದ್ಧಿಯನ್ನು ಪಡೆಯುವುದೇ ಮಾನವನ ಬದುಕಿನ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಆದರೆ ಇಂದು ಎಲ್ಲೆಲ್ಲೂ ಮಾತುಗಾರಿಕೆ ಜಾಸ್ತಿಯಾಗಿ ಕೆಲಸಮಾಡುವ ಪ್ರವೃತ್ತಿ ಕಡಿಮೆಯಾಗಿದೆ. ಇದು ವ್ಯಕ್ತಿಗಾಗಲಿ ಸಮಾಜಕ್ಕಾಗಲಿ ಶುಭಸೂಚಕವಲ್ಲ. ಆದ್ದರಿಂದ ಪ್ರತಿಯೊಬ್ಬರೂ ಮಾತು ಕಡಿಮೆಮಾಡಿ ಹೆಚ್ಚು ಕೆಲಸಮಾಡುವ ಪ್ರವೃತ್ತಿಯನ್ನು ಬೆಳಸಿಕೊಳ್ಳುವುದು ಸರ್ವದೃಷ್ಟಿಯಿಂದ ಹಿತಕರವಾಗಿದೆ.

"ಸಿದ್ಧಗಂಗಾ" ಮಾಸ ಪತ್ರಿಕೆ
ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

## ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

ಜಾಹಿರಾತು ಕಾರ್ಯದರ್ಶಿ
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ಆಜೀವ ಸದಸ್ಯತ್ವ 151-00 ರೂ
ವಾರ್ಷಿಕ ಚಂದಾ 12-00 ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572104
ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಈ ಶತಮಾನದ ಆದಿಯಿಂದ ಸರ್ವಧರ್ಮ ಸಮನ್ವಯಿಗಳಾಗಿ ನಿಸ್ವಾರ್ಥ ಸೇವೆಗೈದ ಪುಣ್ಯಭೂಮಿ ಶ್ರೀ ಸಿದ್ಧಗಂಗಾ ಕ್ಷೇತ್ರ. ಶ್ರೀ ಉದ್ದಾನ ಶಿವಯೋಗಿಗಳು ಇಡೀ ಮಾನವ ಕುಲದ ಕಲ್ಯಾಣಕ್ಕೆ ತಮ್ಮನ್ನು ಮುಡುಪುಗೈದ ಶಿವಯೋಗೀಶ್ವರರು. ಶ್ರೀ ಗುರುಕರ ಸಂಜಾತರಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲೋಕ ಕಲ್ಯಾಣವೇ ತಮ್ಮ ಏಕೈಕ ಗುರಿಯೆಂದು ಭಾವಿಸಿ, ತಮ್ಮ ಗುರುಗಳ ಸತ್‌ಸಂಕಲ್ಪ ವನ್ನು ಸಾರ್ಥಕಗೊಳಿಸಲು ಅಹರ್ನಿಶಿ, ದುಡಿವ ದುಡಿಮೆಯೇ ದೈನಂದಿನ ಕಾಯಕ ದೀಕ್ಷೆಯಾಗಿಸಿದರು. "ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ। ಚರಂತಿ ಅತಿಥಿ ರೂಪೇಣ...." ಎನ್ನುವಂತೆ ಸರ್ವಲೋಕದ ಉಪಕಾರಕ್ಕಾಗಿ ನಾಡಿನ ಬಹುಭಾಗವನ್ನೆಲ್ಲಾ ಸಂಚರಿಸಿದರು. ಅವತಾರೀ ಪುರುಷರಂತೆ ಜನತೆಯಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡಿದರು.

ಕೇವಲ ಪ್ರಚಾರ ಬಿರುದಾವಳಿಗಳಿಗೆ ಮನಸೋಲದೆ ಸನಾತನ ಋಷಿಮುನಿಗಳ ನಿರಂತರ ಉದಾತ್ತ ಚಿರಚಿಂತನೆಯ ಕಡೆ ಕುತೂಹಲಿಗಳಾಗಿ ಜಯಗಳಿಸಿದರು. ಇವರ ಸಾರ್ವಜನಿಕರ ಸೇವೆಯಲ್ಲಿ "ನಭೂತೋ ನ ಭವಿಷ್ಯತಿ" ಎನ್ನುವ ನಿತ್ಯಸತ್ಯವು ಪ್ರತ್ಯಕ್ಷ ಕಂಡವರಿಗೆ ಅಚ್ಚರಿಯನ್ನುಂಟುಮಾಡಿತು. ಒಂದು ವಿಶ್ವವಿದ್ಯಾನಿಲಯ ಮಾಡುವ ಶೈಕ್ಷಣಿಕ ಸಾಧನೆಯನ್ನು ವೀರ ವೈರಾಗ್ಯ ಚಕ್ರವರ್ತಿಗಳಾಗಿ ಮಾಡಿ; ಇತಿಹಾಸ ಪ್ರಸಿದ್ಧ ನಳಂದ ಮೊದಲಾದ ವಿಶ್ವವಿದ್ಯಾನಿಲಯಗಳನ್ನು ಸ್ಮರಣೆಗೆ ತಂದರು. ಒಂದು ಧರ್ಮಸಂಸ್ಥೆಯ ಧರ್ಮದರ್ಶಿಗಳಾಗಿ ದೀಕ್ಷೆ ಕೈಗೊಂಡು, ಧರ್ಮ ಪ್ರಚಾರ, ಧರ್ಮ ಜಾಗೃತಿ, ಧರ್ಮ ಸ್ಥಾಪನೆಗಾಗಿ ಹಲವು ಮಂದಿ ಮಠಾಧೀಶ್ವರರು, ಧರ್ಮ ಚಕ್ರವರ್ತಿಗಳು ಸಾಧಿಸಬಹುದಾದ ಧಾರ್ಮಿಕ ಮನೋಜ್ಞಾನವನ್ನು ಜನ ಮನದಲ್ಲಿ ನೆಲೆಗೊಳಿಸಿ ಧರ್ಮಸ್ಥಾಪನೆಗಾಗಿಯೇ ರೂಪುಗೊಂಡ ವಿಜಯನಗರ ಮೊದ ಲಾದ ಧರ್ಮ ಸಾಮ್ರಾಜ್ಯಗಳನ್ನು ಪುನಸ್ಮರಣೆಗೆ ತಂದರು. ನಾಡಿನ ಭಕ್ತಕೋಟಿಗೆ ಸುಡಿತೀರ್ಥ ಪ್ರಸಾದಗಳನ್ನಿತ್ತು ಪುನೀತರನ್ನಾಗಿ ಮಾಡಿದರು.

ಸಹಸ್ರಾರು ಮಂದಿಗೆ ಜೀವನದ ಆಧಾರ ಸ್ತಂಭವಾದರು. ನಿಮಿಷ ನಿಮಿಷ ವನ್ನು ಗೆದ್ದ, ಅನಿಮಿಷ ಯೋಗ ದೃಷ್ಟಿಯುಳ್ಳ ಯೋಗಿಯಾಗಿ, ನಿರಂತರ ಕಾಯಕ ನಿಷ್ಠೆಯುಳ್ಳ ಕರ್ಮಯೋಗಿಯಾಗಿ, ಮಿಗಿಲಾಗಿ ಸರ್ವಯೋಗ ಸಮನ್ವಯದ ಶಿವ ಯೋಗನಿರತ ಶಿವಯೋಗಿಯಾಗಿ, ಮಾನವೀಯ ಮರುಕವ ಅಮೃತ ಸೇಚನಗೈದ ಪುಣ್ಯಮೂರ್ತಿಗೆ ಸಿಕ್ಕ ಪ್ರತಿಫಲ, ಸತ್ಯಕ್ಕೆ ದೂರವಾದ ಅಪವಾದ, ಅಪಪ್ರಚಾರಗಳು. ಸೂರ್ಯನ ಮುಂದೆ ಘೋರಾಂಧಕಾರವಳಿವಂತೆ ಬ್ರಹ್ಮತೇಜಸ್ಸಿನ ಮುಂದೆ ಇವೆಷ್ಟರವು.

# ನವನೀತ

ಕಾಲಾಂತರೇ ಹ್ಯನರ್ಥಾಯ ಗೃಧ್ರೋ ಗೇಹೋಪರಿಸ್ಥಿತಃ ।
ಖಲೋ ಗೃಹಸಮೀಪಸ್ಥಃ ಸದ್ಯೋಽನರ್ಥಾಯ ದೇಹಿನಾಮ್ ॥

—ಕಲಿವಿಡಂಬನ

ಮನೆಯಮೇಲೆ ಹದ್ದು (ಗೂಬೆ) ಕುಳಿತರೆ ಕಾಲಾಂತರದಲ್ಲಿ ಕೆಡಕು ಉಂಟಾಗುತ್ತದೆ. ದುಷ್ಟನು ಮನೆಯ ಹತ್ತಿರವಿದ್ದರೆ ಸಾಕು, ಸದ್ಯದಲ್ಲೇ ಕೆಡಕು ಸಂಭವಿಸುತ್ತದೆ.

★ ★ ★

ದಂಡಃ ಶಾಸ್ತಿ ಪ್ರಜಾಃ ಸರ್ವಾಃ ದಂಡ ಏವಾಭಿರಕ್ಷತಿ ।
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥

—ಮನುಸ್ಮೃತಿ

ದಂಡದಿಂದ ಎಲ್ಲಾ ಪ್ರಜೆಗಳನ್ನು ಆಳಬಹುದು. ಪ್ರಜೆಗಳನ್ನು ದಂಡವೇ ಕಾಪಾಡುತ್ತದೆ. ಮಲಗಿರುವವರನ್ನು ಸಹ ದಂಡವೇ ಕಾಪಾಡುವುದು. ದಂಡವು ಧರ್ಮದ ಪ್ರಧಾನಾಂಶ. ಅಂದರೆ ತಪ್ಪಿಗೆ ತಕ್ಕ ಶಿಕ್ಷೆ ಧರ್ಮಸಮ್ಮತವಾದುದು.

★ ★ ★

ಖಲಸಖ್ಯಂ ಪ್ರಾಙ್ಮಧುರಂ ವಯೋಽಂತರಾಲೇ ನಿದಾಘದಿನಮಂತೇ ।
ಏಕಾದಿಮಧ್ಯಪರಿಣತಿರಮಣೀಯಾ ಸಾಧುಜನ ಮೈತ್ರೀ ॥

—ಸಮಯೋಚಿತ ಪದ್ಯಮಾಲಿಕಾ

ದುರ್ಜನರ ಸಂಗವು ಆರಂಭದಲ್ಲಿ ರುಚಿಕರ, ವಯಸ್ಸಿನ ನಡುವೆ ತಾರುಣ್ಯದಲ್ಲಿ ಮಧುರ, ಬೇಸಿಗೆ ದಿನ ಕಡೆಯಲ್ಲಿ–ಸಂಜೆ ಮಧುರ. ಸಜ್ಜನರ ಸಂಗವು ಆರಂಭ–ನಡುವೆ–ಕಡೆಯಲ್ಲಿಯೂ ಒಂದೇ ಸಮನಾದ ಮಧುರತೆ ಉಂಟಾಗುತ್ತದೆ.

# ಚಿಂತನ

## ಅಭಿಮಾನ—ಅಭಿರುಚಿ

ಕನ್ನಡದಲ್ಲಿ ಅಭಿಮಾನ, ಅಭಿರುಚಿ ಎಂಬ ಎರಡು ಪದಗಳಿವೆ. ಅಭಿಮಾನವೆಂದರೆ ಆತ್ಮಗೌರವ, ಸ್ವಪ್ರತಿಷ್ಠೆ ಎಂದರ್ಥ. ತನ್ನ ನಾಡು, ತನ್ನ ನುಡಿ, ತನ್ನ ಧರ್ಮ ತನ್ನ ಸಂಸ್ಕೃತಿ ಎಂದು ಆಸಕ್ತಿತೋರಿ, ಆ ಬಗ್ಗೆ ಗೌರವಬುದ್ಧಿಯನ್ನು ಬೆಳೆಸಿಕೊಳ್ಳುವುದು; ತಮ್ಮಲ್ಲಿರುವ ವೈಶಿಷ್ಟ್ಯಗಳನ್ನು ಗುರುತಿಸಿ, ಅವುಗಳ ಬಗೆಗೆ ಗೌರವ ತಳೆದು ಹೆಮ್ಮೆಪಡುವುದು ಸ್ವಾಭಿಮಾನವೆನಿಸುತ್ತದೆ. ತಮ್ಮಲ್ಲಿ ಇಲ್ಲದ್ದನ್ನು ಇದೆ ಎಂದು ಬಡಾಯಿ ಕೊಚ್ಚುವುದು; ತನ್ನದೆಲ್ಲಾ ಕೆಟ್ಟದ್ದು ಎಂದುಕೊಳ್ಳುವುದು ದುರಭಿಮಾನವಾಗುತ್ತದೆ. ತಮ್ಮದರ ಬಗ್ಗೆ ದಿವ್ಯ ನಿರ್ಲಕ್ಷ್ಯ ತಳೆದು ಅನ್ಯ ಸಂಸ್ಕೃತಿಗೆ ಮಾರು ಹೋಗಿ ಅದಕ್ಕೆ ತಮ್ಮನ್ನು ಮಾರಿಕೊಂಡ ಅಭಿಮಾನಶೂನ್ಯರಿಗೇನೂ ನಮ್ಮಲ್ಲಿ ಕೊರತೆಯಿಲ್ಲ. ಭ್ರಮೆಯ ವಶರಾಗಿ ಕಾಮನಬಿಲ್ಲಿನ ಕಮನೀಯತೆಗೆ ಮಾರುಹೋಗಿ ವಾಸ್ತವವಾದ ನಮ್ಮ ಮೌಲ್ಯಗಳನ್ನು ದೂರೀಕರಿಸಿದಾಗ ಆದ ಕೇಡನ್ನು ಚರಿತ್ರೆ ಉಲ್ಲೇಖಿಸಿದೆ. ಇತಿಹಾಸ ಕಲಿಸಿದ ಈ ಪಾಠವೂ ಕೂಡ ಅಂಥವರಿಗೆ ಪಥ್ಯವಾಗಿಲ್ಲ. ನೆರೆಯ ಸೋದರ ಪ್ರಾಂತದ ಜನ ತಮ್ಮ ಭಾಷೆ ಮತ್ತು ಆಚಾರ-ವಿಚಾರಗಳ ಬಗ್ಗೆ ಕಟ್ಟಾಭಿಮಾನಿಗಳಾಗಿ ಅವುಗಳ ಪ್ರಗತಿಗೆ ಬದ್ಧಕಂಕಣವಾಗಿರುವುದು ಕೂಡ ಅವರ ಕಣ್ಣು ತೆರಸಿಲ್ಲ. ಅವರ ಈ ರೋಗಕ್ಕೆ ಸ್ವಾಭಿಮಾನದ ಚುಚ್ಚುಮದ್ದು ಬೇಕು.

ಅಭಿರುಚಿ ಎಂದರೆ ಆಸಕ್ತಿ, ಒಲವು, ರಸಾಸ್ವಾದನ ಶಕ್ತಿ, ಸವಿಯುವ ಶಕ್ತಿ ಎಂದು ಅರ್ಥ. ಒಂದು ವಸ್ತು ಅಥವಾ ಒಂದು ವಿಚಾರದ ಬಗೆಗೆ ನಮ್ಮ ಒಲವು, ನಮ್ಮ ಇಚ್ಛೆ, ನಮ್ಮ ಅಭಿರುಚಿಯಾಗುತ್ತದೆ. ನಾವು ಯಾವ ವಸ್ತುವನ್ನು ಯಾವ ಪ್ರಮಾಣದಲ್ಲಿ ಮತ್ತು ಹೇಗೆ ಬಯಸುತ್ತೇವೆ. ಹಾಗಾಗೆ ನಮ್ಮ ಅಭಿರುಚಿಯ ಮಟ್ಟ ನಿರ್ಧರಿಸಲ್ಪಡುತ್ತದೆ. ನಮ್ಮ ರಸಗ್ರಾಹಿಗುಣ ಉನ್ನತ ಮಟ್ಟದ್ದಿದ್ದರೆ, ಸುಸಂಸ್ಕೃತವಾಗಿದ್ದರೆ ಅದು ಸದಭಿರುಚಿಯೆನಿಸಿಕೊಳ್ಳುತ್ತದೆ; ಕೆಳಮಟ್ಟದ್ದಾದರೆ, ಗುಣಹೀನದ್ದಾದರೆ ಕೀಳು ಅಭಿರುಚಿಯೆನಿಸುತ್ತದೆ. ವೈವಿಧ್ಯಪೂರ್ಣವಾದ ಲೋಕದಲ್ಲಿ ಅಭಿರುಚಿ ಭಿನ್ನವಾಗಿರುವುದು ಸಹಜ. ಲೋಕೋ ಭಿನ್ನ ರುಚಿ: ಎಂಬ ಲೋಕೋಕ್ತಿ ಇದೆ. ಆದರೆ ಅಭಿರುಚಿಯೆಂಬುದು ಜೀವನದ ರಸಸ್ಥಾನಗಳನ್ನು ಗುರುತಿಸುವ ಸಾಧನವಾಗಬೇಕು; ಬಾಳನ್ನು ಹಸನುಗೈವ ಸಂಜೀವಿನಿಯಾಗಬೇಕು. 'ಇನಿವಣ್ಗಳಿರೆ ಬಿಸುಟ್ಟೊಯ್ಯನೆ ವನಮಂಪೊಕ್ಕು ಕಾಕನೋಲ್ಪುದು ಗಡ ಬೇವಿನ ಪಣ್ಣಂ' ಕವಿ ಷಡಕ್ಷರಿ ಹೇಳುತ್ತಾನೆ. ರಸಭರಿತವಾದ ಹಣ್ಣುಗಳು ತುಂಬಿರುವ ತೋಟವನ್ನು ಹೊಕ್ಕ ಗಿಳಿ ಹಾಗೂ ಕಾಗೆಗಳ ಅಭಿರುಚಿಯಲ್ಲಿ ಎಷ್ಟು ವ್ಯತ್ಯಾಸ, ಗಿಳಿ ರಸಭರಿತವಾದ ಮಾವಿಗೋ, ಬಾಳೆಗೋ, ದಾಳಿಂಬೆಗೋ ಎರಗಿದರೆ, ಕಾಗೆ ಪಾಪ ಬೇವಿನ ಹಣ್ಣನ್ನು ತಿನ್ನಲು ಧಾವಿಸುತ್ತದೆ.

(3 ನೇ ರಕ್ಷಾ ಪುಟ ನೋಡಿ)

# ಕ್ಷೇತ್ರ ವಾರ್ತೆ

## ದಿನಾಂಕ 4 ಮತ್ತು 5 ರಂದು ನಡೆದ ಶ್ರೀ ಕ್ಷೇತ್ರದ ದುರ್ಘಟನೆಯನ್ನು ಕುರಿತ ಶ್ರೀ ಶ್ರೀ ಗಳ ಪತ್ರಿಕಾ ಹೇಳಿಕೆ.

ಕೆಳದೆರಡು ದಿನಗಳಿಂದ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆಯುತ್ತಲಿರುವ ಅಹಿತಕರ ಘಟನೆಗಳ ಬಗ್ಗೆ ಸಾರ್ವಜನಿಕರ ಅವಗಾಹನೆಗಾಗಿ ಕೆಲವು ವಿಷಯಗಳ ಬಗ್ಗೆ ಸ್ಪಷ್ಟೀಕರಣ ನೀಡಲು ಬಯಸುತ್ತೇವೆ.

ಎಲ್ಲರಿಗೂ ತಿಳಿದ ಹಾಗೆ ಶ್ರೀ ಸಿದ್ಧಗಂಗಾ ಕ್ಷೇತ್ರವಾದ ಮಠವು 1917 ರಿಂದಲೇ ಉಚಿತ ವಿದ್ಯಾರ್ಥಿ ನಿಲಯವನ್ನು ನಡೆಸುತ್ತಾ ಬಂದಿದೆ. ಯಾವ ಒಂದು ಕಾಲದಲ್ಲಿ ಸರ್ಕಾರವು ಸಾರ್ವಜನಿಕರ ವಿದ್ಯಾರ್ಥಿ ನಿಲಯಗಳ ಸ್ಥಾಪನೆಯನ್ನು ಯೋಚಿಸದಿಲ್ಲದಿರುವಾಗ ಕೋಮುವಾರು ವಿದ್ಯಾರ್ಥಿ ನಿಲಯಗಳ ಸ್ಥಾಪನೆಗೆ ಪ್ರೋತ್ಸಾಹ ನೀಡುತ್ತಿದ್ದ ಕಾಲದಲ್ಲಿಯೇ ಈ ಮಠವು ಸಾರ್ವಜನಿಕ ವಿದ್ಯಾರ್ಥಿನಿಲಯ ಪ್ರಾರಂಭಿಸಿ ಅಂದಿನಿಂದಲೇ ಎಲ್ಲ ಕೋಮಿನ ವಿದ್ಯಾರ್ಥಿಗಳಿಗೂ ಅವಕಾಶವನ್ನು ನೀಡುತ್ತಾ ಬಂದಿರುವುದು ಸರ್ವವಿದಿತ. ಈಗ ಹಾಲಿ ನಮ್ಮ ವಿದ್ಯಾರ್ಥಿನಿಲಯದಲ್ಲಿ ಮುಸ್ಲೀಮರು ಕ್ರಿಶ್ಚಿಯನರೂ ಸೇರಿದಂತೆ 38 ವಿವಿಧ ಕೋಮುಗಳಿಗೆ ಸೇರಿದ 3250 ವಿದ್ಯಾರ್ಥಿಗಳಿದ್ದಾರೆ. ಇದರಿಂದ ಈ ವಿದ್ಯಾರ್ಥಿನಿಲಯವು ಎಲ್ಲೆಲ್ಲೂ ಸಾರ್ವಜನಿಕ ವಿದ್ಯಾರ್ಥಿಗಳ ಪ್ರಸಾದ ನಿಲಯವೆಂದು ಜನಜನಿತವಾಗಿದೆ.

ಕಳೆದ ಹಲವು ತಿಂಗಳುಗಳಿಂದ ಕ್ಯಾತ್ಸಂದ್ರ ವಾಸಿಯಾದ ಪ್ರಸನ್ನ ಎಂಬುವರ ಮುಂದಾಳುತನದಲ್ಲೇ ಕೆಲವು ದುಷ್ಟ ಸ್ವಭಾವದ ವ್ಯಕ್ತಿಗಳಿಂದ ವಿದ್ಯಾರ್ಥಿಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳನ್ನು ಹುಟ್ಟು ಹಾಕುವ ಪ್ರಯತ್ನಗಳು ನಡಿಯುತ್ತಾ ಬಂದವು. ಮೇಲ್ಕಂಡ ಪ್ರಸನ್ನ ಮತ್ತು ಅವನ ಅನುಯಾಯಿಗಳಿಂದ ಕ್ಷೇತ್ರದ ಉಪಾಧ್ಯಾಯರು ಹಾಗೂ ವಿದ್ಯಾರ್ಥಿಗಳ ಮೇಲೆ ಆಗಿಂದಾಗ್ಗೆ ಸಂದರ್ಭಾನುಸಾರ ಕೈ ಮಾಡಿದ ಪ್ರಸಂಗಗಳು ನಡೆಯುತ್ತಾ ಬಂದವು. ಈ ವಿಷಯವನ್ನು ಸೂಕ್ತ ಕ್ರಮಕ್ಕಾಗಿ ಸ್ಥಳೀಯ ಪೋಲೀಸರ ಗಮನಕ್ಕೆ ತರಲಾಗಿತ್ತು.

ದಿನಾಂಕ: 3-2-81 ರಂದು ಮೇಲೆ ಕಾಣಿಸಿದ ಕೆಲವು ದುಷ್ಕರ್ಮಿಗಳೇ ಪುನಃ ತೊಂದರೆಯನ್ನು ಸೃಷ್ಟಿಸಲು ಪ್ರಯತ್ನಿಸಿದರು. ಆಗ ಕ್ಷೇತ್ರದ ವಿದ್ಯಾರ್ಥಿಗಳಿಂದ ಓಡಿಸಲ್ಪಟ್ಟರು. ಇದೇ ದಿನ ಸಂಜೆ ಪ್ರಿಯೂನಿವರ್ಸಿಟಿಯಲ್ಲಿ ವ್ಯಾಸಂಗ ಮಾಡುತ್ತಿರುವ ಕೆಲವು ವಿದ್ಯಾರ್ಥಿಗಳು, ನಾವುಗಳು ಬಂದಾಗ ಅವರನ್ನು ಕೆಲವರು ಥಳಿಸಿದರೆಂದೂ ಆದರೆ ಅವರು ಯಾರೆಂದು ಗುರುತಿಸಲು ಸಾಧ್ಯವಿಲ್ಲವೆಂದು ತಿಳಿಸಿದರು. ಆಮೇಲೆ ಅವರಲ್ಲಿ ಕೆಲವರು ಸಹ ವಿದ್ಯಾರ್ಥಿಗಳು ಅವರ ಮೇಲೆ ಕೈಮಾಡುವರೆಂದು ಭಯಪಟ್ಟು ಮಠವನ್ನು ಬಿಟ್ಟುಹೋಗಲು ತಮಗೆ ಅಪ್ಪಣೆ ಕೊಡಬೇಕೆಂದು

(59 ನೇ ಪುಟ ನೋಡಿ)

# ಮರ್ತ್ಯಲೋಕದ ಮಹಾಬೆಳಗು ಉದ್ದಾನಯತೀಶ

—ಚನ್ನಪ್ಪ ಎರೇಸೀಮೆ

## ಲಕ್ಕೂರ ರುದ್ರಪ್ಪ ಸಿದ್ಧಗಂಗೆಯ ಉದ್ದಾನಪ್ಪನಾದ :

ರುದ್ರಪ್ಪ ಸಿದ್ಧಗಂಗೆಯನ್ನು ಸೇರಿ ಅಟವೀಸ್ವಾಮಿಗಳು ಕ್ಷೇತ್ರದಲ್ಲಿ ಪ್ರಾರಂಭಿಸಿದ್ದ ಸಮಸ್ತ ದಾಸೋಹ ಕಾರ್ಯವನ್ನು ನಿರ್ವಹಿಸಿಕೊಂಡು ಬರುವ ಸಾಮರ್ಥ್ಯ ಪಡೆದರು. ಎಲ್ಲೆಲ್ಲಿಯು ಇವರ ಮಿಂಚಿನ ವೇಗದ ಚಟುವಟಿಕೆ, ಕಂಚಿನಂಥ ಕಂಠದ ಕಲಕಲ ನಿನಾದಗಳಿಂದ ಕ್ಷೇತ್ರದಲ್ಲಿ ಒಂದು ಹೊಸ ಕಳೆ ಮೂಡಿ ಬಂದು ನಳನಳಿಸ ತೊಡಗಿತು. ಅಟವೀಶ್ವರರು ತಾನು ಈ ಪುಣ್ಯಕ್ಷೇತ್ರಕ್ಕೆ ಬಂದು ಮಾಡಿದ ಲೋಕೋತ್ತರ ಕಾರ್ಯಗಳು ಇನ್ನೂ ನಿರ್ಬಾಧಿತವಾಗಿ ನಡೆದುಕೊಂಡು ಹೋಗುತ್ತವೆಂದೂ ಈ ರುದ್ರಪ್ಪನೇ ಈ ಕ್ಷೇತ್ರಾಧಿಪತಿಯೆಂದೂ ತೀರ್ಮಾನಿಸಿಬಿಟ್ಟರು. ಅವರಿಗೆ ಕ್ಷೇತ್ರದ ಎಲ್ಲಾ ಜವಾಬ್ದಾರಿಗಳನ್ನು ಕೊಟ್ಟುಬಿಟ್ಟರು.[15] ಕೆಲವು ದಿನಗಳಲ್ಲಿ ಇವರನ್ನು 'ಉದ್ದಾನಶಿವಯೋಗಿ' ಎಂಬ ನೂತನ ಅಭಿಧಾನದಿಂದ, 1300ರಿಂದ ಉಜ್ವಲ ಚರಿತ್ರೆಯನ್ನು ಹೊಂದಿದ ಮಹಾ ತೇಜೋ ವಿಶಿಷ್ಟವೂ ಅಘಟಿತ ಘಟನಾ ಸಮರ್ಥರಾದ ಶಿವಯೋಗಿಪುಂಗವರ ತಪೋಭೂಮಿಯೂದ ಸಿದ್ಧಗಂಗಾಕ್ಷೇತ್ರದ ಜಂಗಮಪುಂಗವರನ್ನಾಗಿ ಅಧಿಕಾರಿಗಳನ್ನಾಗಿ ಮಾಡಿದರು. ಈ ಸಂದರ್ಭದಲ್ಲಿ ಅಧಿಕಾರಕ್ಕಾಗಿ ಕೆಲವು ಅಹಿತಕರ

---

15 ಅಟವೀಸ್ವಾಮಿಗಳು ಗುಬ್ಬಿಯಿಂದ ಸಿದ್ಧಗಂಗೆಗೆ ಬಂದಾಗ ಇಲ್ಲಿ ಮುಗ್ಧರೂ ವ್ಯವಹಾರ ಚಾತುರ್ಯವನ್ನೇ ಅರಿಯದ ಸಿದ್ಧಲಿಂಗಪ್ಪಸ್ವಾಮಿಗಳು ಇದ್ದರೆಂದು ಈ ಹಿಂದೆ ತಿಳಿಸಿದೆ. ಅವರು ದುರ್ಬಲರಾಗಿದ್ದು, ಕ್ಷೇತ್ರದ ಕಾರ್ಯಬಾಹುಳ್ಯ ಅವರಿಂದ ನಡೆಸಿಕೊಂಡು ಹೋಗಲು ಸಾಧ್ಯವಿಲ್ಲವೆಂದುಕೊಂಡು ತಿಳಿದು ಕ್ಷೇತ್ರದ ಎಲ್ಲ ಅಧಿಕಾರವನ್ನು ಪಡೆದುಕೊಂಡು ಕ್ಷೇತ್ರವನ್ನು ಅಭಿವೃದ್ಧಿಗೊಳಿಸಿದ್ದರು. ಸಿದ್ಧಲಿಂಗಸ್ವಾಮಿಗಳು ಪೂರ್ವಾಶ್ರಮದಲ್ಲಿ ಕ್ಷೇತ್ರದ ಪಕ್ಕದಲ್ಲಿಯೇ ಇರುವ ಅರೆಪಾಳ್ಯದಲ್ಲಿರುವ ಇವರ ವಂಶಸ್ಥರು ಅರೆಪಾಳ್ಯದಲ್ಲಿ ಇನ್ನೂ ಇದ್ದಾರೆ. ಇವರಿಗೂ ಹಿಂದೆ ರುದ್ರಸ್ವಾಮಿಗಳು ಮುಪ್ಪಿನಸ್ವಾಮಿಗಳವರು ಎಂಬ ಸ್ವಾಮಿಗಳು ಇಲ್ಲಿ ಆಗಿ ಹೋಗಿದ್ದಾರೆ. ಅವರ ಚರಿತ್ರೆಗಳು ಸ್ಪಷ್ಟವಾಗಿ ಗೊತ್ತಿಲ್ಲ, ಗದ್ದಿಗೆಗಳು ಮಾತ್ರ ಇವೆ. ಇವರೆಲ್ಲರ ಕಾಲದಲ್ಲಿ ಕ್ಷೇತ್ರವು ಉತ್ತಮ ಸ್ಥಿತಿಯಲ್ಲಿ ಇರಲಿಲ್ಲ ಎಂದು ತಿಳಿದು ಬರುವುದು.

ಘಟನೆಗಳು ನಡೆದುವೆಂದೂ ತಿಳಿದುಬರುವುದು. ಆ ಸಮಯದಲ್ಲಿ ಮಠದ ಖರ್ಚು
ವೆಚ್ಚಗಳು ಅಧಿಕಗೊಂಡು ಆರ್ಥಿಕ ಪರಿಸ್ಥಿತಿ ತುಂಬ ಹದಗೆಟ್ಟುಹೋಗಿತ್ತು.

ಅಟವೀಸ್ವಾಮಿಗಳವರು ತೀವ್ರ ಅನಾರೋಗ್ಯಕ್ಕೊಳಗಾದರು. ಅವರನ್ನು ತುಮ
ಕೂರಿನ ಕೆಲವು ಭಕ್ತರು ಬಂದು ಉಪಚಾರಕ್ಕೆಂದು ಕರೆದೊಯ್ದರು. ಉದ್ದಾನಪ್ಪ
ನವರು ಮಠದಲ್ಲಿಯೇ ಉಳಿದರು. ದಿನೇ ದಿನೇ ಅನಾರೋಗ್ಯ ಅಧಿಕಗೊಂಡು ಕೊನೆಯ
ಸ್ಥಿತಿಯೇ ಪ್ರಾಪ್ತವಾಯಿತು. ಉದ್ದಾನ ಶಿವಯೋಗಿಗಳಿಗೆ ವಿಷಯ ತಿಳಿದು ಧಾವಿಸಿ
ತುಮಕೂರಿಗೆ ಳಿದರು. ಆಗ ಅಟವೀಶ್ವರರಿಗೆ ಎಚ್ಚರ ತಪ್ಪಿ ಮಾತು ನಿಂತು
ಹೋಗಿತ್ತು. ಉದ್ದಾನ ಶಿವಯೋಗಿಗಳು ಹೋಗಿ ವೈಕೈ ಮುಟ್ಟಿ ಗುರುವೇ ಪರಮ
ಗುರುವೇ ನಾನು ಬಂದಿದ್ದೇನೆ. ಈ ಸ್ಥಿತಿಯಲ್ಲಿ ನನ್ನನ್ನೊಮ್ಮೆ ಕಣ್ಬಿಟ್ಟು ನೋಡ
ಬಾರದೆ ಎಂದು ಕೂಗಿಕೊಂಡರು. ಅಟವೀಶ್ವರರು ಕಣ್ಣು ಬಿಟ್ಟರು. ನೆಚ್ಚಿನ ಕೆಚ್ಚೆ
ದೆಯ ಶಿಷ್ಯೋತ್ತಮನ ಮುಖ ನೋಡಿದರು. ತೃಪ್ತಿಯ ನಿಟ್ಟುಸಿರು ಬಿಟ್ಟರು.
"ನಾನೀಗ ಎಲ್ಲಿದ್ದೇನೆ?" ಎಂದು ಅಟವೀಶ್ವರರು ಉದ್ದಾನ ಶಿವಯೋಗಿಗಳನ್ನು ಅಸ್ಪಷ್ಟ
ಧ್ವನಿಯಲ್ಲಿ ಪ್ರಶ್ನಿಸಿದರು. ಉದ್ದಾನಪ್ಪನವರು 'ತಾವೀಗ ತುಮಕೂರಿನ ಭಕ್ತರ
ಮನೆಯಲ್ಲಿದ್ದೀರೆಂದು' ಕಿವಿಯಲ್ಲಿ ಹೇಳಿದರು. 'ಸಿದ್ಧಗಂಗೆಯಲ್ಲಿ ಇಲ್ಲವೇ' ಎಂದು ಪುನಃ
ಕೇಳಿದರು. ಅದಕ್ಕೆ ಉದ್ದಾನಪ್ಪಗಳು ಇಲ್ಲ ಎಂದು ಉತ್ತರಿಸಿದರು. ಆಗ ಅಟವೀ
ಸ್ವಾಮಿಗಳವರ ಮುಖ ಇನ್ನೂ ಖಿನ್ನವಾಯಿತಂತೆ. ಆಗ ಅವರು ಸುತ್ತಮುತ್ತಲ
ಭಕ್ತರನ್ನೆಲ್ಲ ಹೊರಗೆ ಹೋಗುವಂತೆ ಸಂಜ್ಞೆ ಮಾಡಿದರು. ಸುತ್ತಮುತ್ತ ನೆರೆದಿದ್ದ
ಭಕ್ತರೆಲ್ಲ ಹೊರಗೆ ಹೊರಟುಹೋದರು. ಆಗ ಅಟವೀಶ್ವರರು ತಮ್ಮ ಎಲ್ಲ ನಿರೋಧ
ಗಳನ್ನು ಆದುಮಿ ಶಕ್ತಿಸಂಚಯನವನ್ನು ಪ್ರಯತ್ನದಿಂದ ಅಧಿಕಗೊಳಿಸಿದರು. 'ಉದ್ದಾ
ನಪ್ಪ, ನೀನು ಈಗ ಮಠವನ್ನೇಕೆ ಬಿಟ್ಟು ಬಂದೆ' ಈ ಸುತ್ತಮುತ್ತಲಿನ ಜನ ನಿನ್ನ
ಯೋಗ್ಯತೆಯನ್ನು ಅರಿಯರು, ನಿನಗಾರು ಇವರು ಸೇರುವುದಿಲ್ಲ. ನೀನು ಈ
ಕೂಡಲೇ ಮಠಕ್ಕೆ ಹೋಗು. ಈ ಸಮಯದಲ್ಲಿ ನೀನು ಇಲ್ಲಿಗೆ ಬಂದುದು ಒಳ್ಳೆಯದೇ
ಆಯಿತು. ನನ್ನ ಸರ್ವಶಕ್ತಿಯನ್ನು ನಿನಗೆ ಧಾರೆಯೆರೆದುಬಿಟ್ಟಿದ್ದೇನೆ. ಈಗ ನನ್ನಲ್ಲಿ
ನನ್ನದೆನ್ನುವುದೇನೂ ಉಳಿದಿಲ್ಲ. ನೀನು ಸಿದ್ಧಗಂಗೆಯ ಯೋಗಕ್ಷೇಮವನ್ನು ಎಚ್ಚರ
ದಿಂದ ನೋಡಿಕೊಂಡು ಆ ಮಹಾ ಸಂಸ್ಥೆಯನ್ನು ಬೆಳೆಸು, ಹೆದರಬೇಡ. ಮಠದಲ್ಲಿ
ನನ್ನ ಗದ್ದುಗೆ ಕಟ್ಟಿಸು. ನಾನು ಸದಾ ನಿನ್ನ ಬೆಂಬಲಕ್ಕಿರುತ್ತೇನೆ' ಇತ್ಯಾದಿ ಹೇಳಿ ತಾವು
ಅವರಿಗೆ ಏನು ಕೊಡಬೇಕೋ ಅದನ್ನೆಲ್ಲಾ ಮೈಮೇಲೆ ಕೈಯಾಡಿಸಿ ತಲೆಯಮೇಲೆ ಕೈ
ಇಟ್ಟು ಹರಸಿ ಕಳುಹಿಸಿದರು. ದುಃಖತಪ್ತ ಉದ್ದಾನಪ್ಪನವರು ಉತ್ಕಂಠಿತರಾಗಿ ಶ್ರೀ
ಸಿದ್ಧಗಂಗಾ ಕ್ಷೇತ್ರಕ್ಕೆ ಬಿಕ್ಕಿಬಿಕ್ಕಿ ಅಳುತ್ತ ಹೊರಟುಬಂದುಬಿಟ್ಟರು. ಇತ್ತ ಅಟವೀ
ಸ್ವಾಮಿಗಳು ಲಿಂಗೈಕ್ಯರಾದರು. ಇವರ ಲಿಂಗತನುವನ್ನು ತೊಟ್ಟಲಕೆರೆಗೆ ಒಯ್ದು ಅಲ್ಲಿ
ಸಮಾಧಿ ಮಾಡಿದರು. ತೊಟ್ಟಲಕೆರೆಯ ಮಠವನ್ನು ಅಟವೀಸ್ವಾಮಿಗಳೇ ಅಭಿವೃದ್ಧಿ

ಗೊಳಿಸಿದ್ದರು. ಅಲ್ಲಿಯೇ ತಮ್ಮ ಸಮಾಧಿಯಾಗತಕ್ಕದೆಂದು ಅಡವೀಸ್ವಾಮಿಗಳು ಎಲ್ಲರಿಗೂ ಹೇಳಿದ್ದರ ಮೇರೆಗೆ ಕೂಡಲೇ ಸಿದ್ಧವಾಗಿದ್ದ ಸಮಾಧಿಯಲ್ಲಿ ಅವರ ಸಮಾಧಿ ಕ್ರಿಯೆಗಳು ಕ್ರಿ. ಶ. 1901 ನೆಯ ಕಾರ್ತಿಕ ಮಾಸದ ಶುಕ್ಲಪಕ್ಷ ಅಷ್ಟಮಿಯ ದಿನ ನೆರವೇರಿಸಿದುವು.

ಇತ್ತ ಮಠದಲ್ಲಿಯಾದರೋ ಕೆಲವು ವಿರೋಧಗಳ ಮೂಲಕ ಏನೂ ಇಲ್ಲದಂತಾಗಿತ್ತು. ನಿಚ್ಚನಿಚ್ಚ ಆಚರಿಸುವ ದಾಸೋಹದ ವ್ಯವಸ್ಥೆಯೇ ಹದಗೆಟ್ಟುಹೋಗಿತ್ತು. ಗುರುಗಳಾದ ಅಟವೀಸ್ವಾಮಿಗಳು ನನ್ನ ಗದ್ದುಗೆಯೆಂದು ಅಪ್ಪಣೆ ಮಾಡಿದ್ದಾರೆ. ಆ ಗುರುವಾಕ್ಯವನ್ನು ಈಡೇರಿಸಲೇ ಬೇಕು. ಏನು ಮಾಡುವುದು, ಎಂಬ ಚಿಂತೆಯಲ್ಲಿ ಅನೇಕ ರಾತ್ರಿಯೆಲ್ಲ ನಿದ್ರೆಯನ್ನೇ ಉದ್ದಾನಪ್ಪನವರು ಮಾಡಲಿಲ್ಲ. ಮೂರು ತಿಂಗಳು ಹೀಗೆಯೇ ಕಾಲಕಳೆದರು. ಒಂದು ದಿನ ಬೆಳಗಿನ ಜಾವದಲ್ಲಿ ಅಟವೀಶ್ವರರು ಕನಸಿನಲ್ಲಿ ಕಾಣಿಸಿಕೊಂಡು, ಉದ್ದಾನಪ್ಪ ಚಿಂತೆಯೆಂಬುದು ಶಿವಯೋಗಿಗುಂಟೆ? ನೀನು ಅಧೀರನಾಗಬೇಡ. ನಾನು ಸದಾ ನಿನ್ನ ಬೆಂಬಲಕ್ಕೆ ಇದ್ದೇಇದ್ದೇನೆ. ನಾಳೆಯೇ ನನ್ನ ಗದ್ದುಗೆಯ ಕೆಲಸ ಪ್ರಾರಂಭಿಸು, ಎಂದು ಹೇಳಿ ಮಂಡೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದಂತಾಯಿತು. ಬೆಳಗಾಗುತ್ತಲೆ, ಅತ್ಯುತ್ಸಾಹದಿಂದ ಸ್ನಾನ ಪೂಜೆಗಳನ್ನು ತೀರಿಸಿಕೊಂಡು ಸ್ವತಃ ತಾವೇ ಕೈಯಲ್ಲಿ ಗುದ್ದಲಿ ಹಿಡಿದು ಅಟವೀಸ್ವಾಮಿಗಳ ಗದ್ದುಗೆಯ ಪಾಯ ತೋಡುವ ಕೆಲಸಕ್ಕೆ ಮೊದಲು ಮಾಡಿದರು. ಒಬ್ಬರನ್ನು ಸಹಾಯಕ್ಕೆ ತೆಗೆದುಕೊಂಡು ಹಗ್ಗ ಹಿಡಿದು ಗುರುತುಮಾಡಿಕೊಂಡು ನೆಲವನ್ನು ಅಗಿಯತೊಡಗಿದರು. ನೋಡುವ ಜನ ಇವರ ಈ ಕೆಲಸವನ್ನು ಕಂಡು ಅವಾಕ್ಕಾದರು.

### ಇಗೋ ಸ್ವಾಮಿ ಹರಕೆಯನ್ನು ಒಪ್ಪಿಸಿಕೊಳ್ಳಿ.

ಉದ್ದಾನಪ್ಪನವರು ಮಧ್ಯಾಹ್ನದವರೆಗೆ ಗದ್ದುಗೆಯ ಪಾಯ ತೆಗೆದು ತಮ್ಮ ಕೈ ನೋಡಿಕೊಂಡರು ಕೈಯಲ್ಲೆಲ್ಲಾ ಬೊಬ್ಬೆಯೆದ್ದಿದ್ದವು. ಆಮೇಲೆ ಸ್ನಾನಕ್ಕೆ ತೆರಳಿ ಸ್ನಾನ ಶಿವಪೂಜೆ ಮುಗಿಸಿಕೊಂಡು ಬಂದು ದಾಸೋಹ ಮಠದ ಮುಂಭಾಗದಲ್ಲಿ ಮಂಡಿಸಿದರು. ಅಂದಿನ ಅವರ ಮುಖದ ಮೇಲಿನ ಹುಮ್ಮಸ್ಸು ಮೂರು ಲೋಕವನ್ನೇ ಸತ್ಕ್ರಿಯೆಯಿಂದ ಗೆದ್ದೆನೆಂಬ ಆತ್ಮಪ್ರತ್ಯಯದ ಉತ್ಸಾಹಾಧಿಕ್ಯದಿಂದ ಹೊಳೆಯುತ್ತಿತ್ತು. ಬಾಹುವಿನಲ್ಲಿ ಅದ್ಭುತಶಕ್ತಿ ಸಂಚಾರವಾಗುತ್ತಿದ್ದುದನ್ನು ಕಂಡುಕೊಂಡರು. ಹೀಗಿರುತ್ತಿರುವಲ್ಲಿ ಆಂಧ್ರದೇಶದ ಒಬ್ಬ ಸದ್ಗೃಹಸ್ಥ ರೆಡ್ಡಿಯು ತನ್ನ ಹೆಂಡತಿ ಮತ್ತು ಚಿಕ್ಕ ಹಸುಳೆಯೊಂದನ್ನೊಡಗೊಂಡು ಬಂದು ಶ್ರೀ ಉದ್ದಾನ ಶಿವಯೋಗಿಗಳ ಪಾದಗಳ ಮೇಲೆ ಮಗುವನ್ನಿಟ್ಟು 'ಸ್ವಾಮಿಯ ಕೃಪೆಯಿಂದ ಉಂಟಾದ ನನ್ನ ವಂಶದ ಕುಡಿಯಿದು. ಕಳೆದ ಹದಿನಾರು ವರ್ಷದಿಂದ ನನ್ನ ಸಂಸಾರದಲ್ಲಿ ಸಂತಾನ ಅಭಾವದಿಂದ ಸುಖವನ್ನೇ ಕಾಣದೆ ತೊಳಲುತ್ತಿದ್ದೆ. ಸ್ವಾಮಿಯ ಕೃಪೆಯಿಂದ ಇಂದು ನನಗೆ

ಉಂಟಾದ ಈ ಗಂಡು ಸಂತಾನದಿಂದ ಕೃತಾರ್ಥನಾದೆ. ಇಗೋ ನನ್ನ ಹರಕೆಯ ಕಾಣಿಕೆಯನ್ನು ಒಪ್ಪಿಸಿಕೊಳ್ಳಿ, ಎಂದು ಎರಡೂನೂರ ಐವತ್ತು ರೂಪಾಯಿಗಳ ಹೆಮ್ಮಿಣಿಯನ್ನು ಸ್ವಾಮಿಯ ಪಾದಗಳ ಮೇಲಿಟ್ಟು, ಪುನಃ ಪುನಃ ನಮಸ್ಕಾರ ಮಾಡಿ ಎದ್ದು ನಿಂತನು. ಉದ್ದಾನಸ್ವಾಮಿಗಳು ಅವಾಕ್ಕಾದರು, ರಾತ್ರಿ ಕನಸಿನಲ್ಲಿ ಶಿವಯೋಗಿಪುಂಗವರಾದ ಅಟವೀಶ್ವರ ಗುರುಗಳು ಬಂದು ಯಾವುದಕ್ಕೂ ಚಿಂತಿಸಬೇಡ ನಾನು ಸದಾ ನಿನ್ನ ಬೆಂಬಲಕ್ಕಿದ್ದೇನೆ ಏಳೆಂದು ಎಬ್ಬಿಸಿ ಆಶೀರ್ವದಿಸಿದ ಘಟನೆ ಜ್ಞಾಪಕಕ್ಕೆ ಬಂದು ಅವಾಕ್ಕಾದರು. ಇಗೋ ಅಡವಿಸ್ವಾಮಿಗಳ ಕೃಪೆ ಇಂದಿನಿಂದ ಪ್ರಾರಂಭವಾಯಿತು. ಹೆದರಬೇಡ ಎದ್ದೇಳು ಎಂದು ಒಳಗಿನಿಂದ ಅವ್ಯಕ್ತಧ್ವನಿಯೊಂದು ಬಡಿದು ಎಬ್ಬಿಸಿದಂತಾಯಿತು. ನೂರ್ಮಡಿ ಉತ್ಸಾಹ ದೇಹದಲ್ಲಿ ಸಂಚಾರವಾಯಿತು. ಆಂಧ್ರದ ರೆಡ್ಡಿಯವರ ಧನವನ್ನು ಸ್ವೀಕರಿಸಿ ಅವರಿಗೆ ಆಶೀರ್ವಾದ ಮಾಡಿ ಪ್ರಸಾದವಿತ್ತು, ಕಳಿಸಿಕೊಟ್ಟರು. ಆ ಎರಡುನೂರು ಐವತ್ತು ರೂಪಾಯಿಗಳ ಪ್ರಸಾದದ ಬಲದಿಂದ ಉದ್ದಾನ ಸ್ವಾಮಿಗಳು ಸಿದ್ಧಗಂಗಾ ಮಹಾದಾಸೋಹ ಮಠದ ಅಭಿವೃದ್ಧಿ ಕಾರ್ಯಗಳಲ್ಲಿ ಮಗ್ನರಾದರು. ದಿನೇ ದಿನೇ ಅವರ ಅದ್ಭುತ ಪರುಷ ಶಕ್ತಿ ಪ್ರಕಟವಾಗುತ್ತ ನಡೆಯಿತು. ಮಠದ ಅಭಿವೃದ್ಧಿಕಾರ್ಯಗಳೂ, ದಾಸೋಹ ವ್ಯವಸ್ಥೆಯೂ, ವಿದ್ಯಾರ್ಥಿನಿಲಯಗಳ ಶಿಕ್ಷಣಸಂಸ್ಥೆಗಳ ಕಾರ್ಯಗಳೂ ನಿರ್ಬಾಧಿತವಾಗಿ ನಡೆಯತೊಡಗಿ 'ಕೊಡುವವ ಸಂಗ, ಕೊಳ್ಳುವವ ಕೂಡಲ ಸಂಗಮದೇವ' ಎಂಬ ಬಸವಣ್ಣನವರ ಉಕ್ತಿಗೆ ಸಾರ್ಥಕ್ಯ ವುಂಟಾಗತೊಡಗಿತು. ಲೋಕಜೀವನಕ್ಕೆ ಪೂರಕವಾಗುವ ಲೌಕಿಕ ಪಾರಮಾರ್ಥಿಕ ಅನೇಕ ಕಾರ್ಯಗಳ ಭದ್ರಭವನಕ್ಕೆ ತಳಹದಿ ಹಾಕಿದರು. ದಿನೇ ದಿನೇ ಅವರ ಶಿವಲಿಂಗ ಲೀಲೆ ಅಧಿಕಗೊಳ್ಳತೊಡಗಿತು. ಅವರೊಬ್ಬ ಕಾರಣಪುರುಷರಾಗಿ ಲೋಕಕ್ಕೆ ಕಾಣಿಸಿಕೊಳ್ಳತೊಡಗಿದರು.

## ಪ್ರಬಲ ಸಂಕಲ್ಪ ಶಕ್ತಿಯ ಉದ್ದಾನೇಶ್ವರರು :

ಉದ್ದಾನ ಶಿವಯೋಗಿಗಳು ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ಮೇಲೆ ಅವರು ಸಾಧಿಸಿದ ಸಾಧನೆ ಆ ಕಾಲದಲ್ಲಿ ಅತ್ಯದ್ಭುತವಾದದ್ದು. ಲೌಕಿಕ ದೃಷ್ಟಿಯಲ್ಲಿ ಅವರು ಅಷ್ಟೊಂದು ವಿದ್ಯಾವಂತರಲ್ಲ. ಆದರೆ ಓದುಬರೆಹವನ್ನು ಅಷ್ಟಿಷ್ಟು ಬೆಳೆಸಿಕೊಂಡಿದ್ದರು. ಅವರ ಮಾತಿನಲ್ಲೇ ಹೇಳಬೇಕೆಂದರೆ 'ಸ್ವಲ್ಪ ಓದಿ ಬಹಳ ತಿಳಿದುಕೊಳ್ಳಬೇಕು' ಅನ್ನುವಂತೆ ಅವರ ಓದಿನ ಪರಿ. ಕುರಿತೋದಿ ವಿದ್ಯಾವಂತರೆನ್ನಿಸಿಕೊಂಡವರಲ್ಲ. ಆದರೆ ಅವರ ವಿದ್ಯಾವೈದುಷ್ಯದ ಸಂಪದ್ಭರಿತ ವ್ಯಕ್ತಿತ್ವದ ಅರಿವು ಕೆಲವರಿಗೆ ಮಾತ್ರ ಇತ್ತು. ಅವರದು ಅಕ್ಷರವಿದ್ಯೆಯಲ್ಲ, ಶಿವಯೋಗವಿದ್ಯೆ. ಲೋಕ ಸಂಗ್ರಹ ಧಾರಣವಿದ್ಯೆ; ಸರ್ವಲೋಕೋಪಕಾರಕವಿದ್ಯೆ. ಅವರು ಬಸವಣ್ಣನಂತೆ ಹಸ್ತಪರುಷ, ದೃಷ್ಟಿಪರುಷ, ನಡೆನುಡಿ ಭಾವಪರುಷ ಶಕ್ತಿಯನ್ನು ತಮ್ಮ ನಿಷ್ಠಾಪೂರ್ವಕ ಲಿಂಗತಪಸ್ಸನ್ನಾಚರಿಸಿ

ಪಡೆದಿದ್ದರು. ಮಠಕ್ಕೆ ಹೆಚ್ಚು ಜನ ಬರಬೇಕು, ಅವರೆಲ್ಲ ತೃಪ್ತಿಯಾಗಿ ಊಟಮಾಡಬೇಕು; ವಿದ್ಯಾರ್ಥಿಗಳು ಮಠಕ್ಕೆ ಬರಬೇಕು, ಅವರು ಸತ್ಶೀಲರಾಗಿ ಬೆಳೆಯಬೇಕು ಮತ್ತು ಬಾಳಬೇಕು. ಚೆನ್ನಾಗಿ ಓದಿ ವಿದ್ವಾಂಸರಾಗಬೇಕು, ಚೆನ್ನಾಗಿಯೂ ಊಟ ಮಾಡಬೇಕು; ಕೆಲಸವನ್ನು ಚೆನ್ನಾಗಿ ಮಾಡಬೇಕು; ಎಲ್ಲವೂ ಚೆನ್ನಾಗಿರಬೇಕೆಂಬುದೇ ಅವರ ಉತ್ಕಟೇಚ್ಛೆ. ಸೋಮಾರಿಗಳು, ಹೇಡಿಗಳು ಅವರಿಗೆ ಸಲ್ಲದು. ಓದಿದವರನ್ನು ಸ್ವಾಮಿಗಳವರು ಪರೀಕ್ಷೆ ಮಾಡುತ್ತಿದ್ದುದೂ ಉಂಟು; ಚೆನ್ನಾಗಿ ಓದುವವರಿಗೆ ಕಲ್ಲುಸಕ್ಕರೆ, ಹಣ್ಣು, ಬಟ್ಟೆಬರೆ ಎಲ್ಲವನ್ನು ತಾವೇ ಕೊಡಬೇಕು. ಅವರ ಕೈಯಿಂದ ಈ ರೀತಿ ಪ್ರಸಾದವನ್ನು ಪಡೆದವರು, ಅವರಿಂದ ಏಟು ತಿಂದವರು ಈಗಲೂ ಇದ್ದಾರೆ.[16] ತಮ್ಮ ಮನಸ್ಸಿಗೆ ಇವನು ಬುದ್ಧಿವಂತ ವಿದ್ಯಾರ್ಥಿಯೆಂದು ಹೊಳೆದರಾಯಿತು ಮಠಕ್ಕೆ ಬಂದವರೆದುರು ಆ ವಿದ್ಯಾರ್ಥಿಯ ಬಗೆಗೆ ಹೆಮ್ಮೆಯಿಂದ ಹೇಳಿಕೊಳ್ಳದೆ ಇರುತ್ತಿರಲಿಲ್ಲ. ಇದರಿಂದ ವಿದ್ಯಾರ್ಥಿಗಳಲ್ಲಿ ಆತ್ಮಪ್ರತ್ಯಯ ತುಂಬಿ ಶ್ರದ್ಧೆಯಿಂದ ಅವರು ಶ್ರೀಗಳವರ ಕೃಪೆಗೆ ಪಾತ್ರರಾಗಲು ಸ್ಪರ್ಧೆಯಿಂದ ಓದುತ್ತಿದ್ದರೆಂದು ಆಗಿನ ವಿದ್ಯಾರ್ಥಿಗಳನೇಕರು ಹೇಳುತ್ತಿದ್ದಾರೆ.

ನಿತ್ಯ ನಿತ್ಯ ಮಠದ ಖರ್ಚುವೆಚ್ಚಗಳಿಗೆಲ್ಲ ಉದ್ದಾನಸ್ವಾಮಿಗಳವರ ಜೋಳಿಗೆಯ ಬಲವೇ ಬಲ. ದಾಸೋಹ ವ್ಯವಸ್ಥೆ ಹಿಂದಿಗಿಂತ ಶತಾಧಿಕ, ಸಹಸ್ರಾಧಿಕ. ಆದರೆ ಉದ್ದಾನ ಶಿವಯೋಗಿಗಳು ಯಾರನ್ನೂ ಯಾಚಿಸಿದವರೇ ಅಲ್ಲ. ಅಗಾಧ ಸಂಕಲ್ಪಶಕ್ತಿ ವಿಶಿಷ್ಟರಾದ ಅವರ ಸಂಕಲ್ಪಕ್ಕೆ ಉಂಟಾದ ಯಾವ ಕಾರ್ಯಕ್ಕೂ ಅಡೆತಡೆ ಬಂದಂತಿಲ್ಲ. ಇದು ಅವರ ಪರುಷಶಕ್ತಿಯಲ್ಲದೆ ಬೇರಲ್ಲ. ಧಾರವಾಡದ ಮೃತ್ಯುಂಜಯಪ್ಪಗಳು ಅಥಣಿ ಶಿವಯೋಗಿಗಳವರ ಸಂಕಲ್ಪಶಕ್ತಿ, ಪರುಷ ಶಕ್ತಿಯ ಬಗೆಗೆ ಆಗಾಗ ವಿವರಿಸುತ್ತಿದ್ದರು. ಅವೆಲ್ಲವನ್ನೂ ಬಹು ಜನರು ಕೇಳಿದ್ದಾರೆ. ಅವರ ಚರ್ಯೆಯೆಲ್ಲಾ ಉದ್ದಾನ ಸ್ವಾಮಿಗಳವರಲ್ಲಿ ಕಾಣುತ್ತಿತ್ತು. ಜೋಳಿಗೆಯ ಮಹತ್ತು ಬೃಹತ್ತುಗಳೇನೆಂಬುದನ್ನು ಇಂದಿಗೂ ಸಿದ್ಧಗಂಗೆಗೇ ಹೋಗಿ ನೋಡಬೇಕು. ದೀನರು, ದಲಿತರು, ಜೀವನದ ಅನೇಕ ಕಷ್ಟಕಾರ್ಪಣ್ಯಗಳಿಂದ ನೊಂದು ಬೆಂದವರು ಶ್ರೀಗಳವರ ಹತ್ತಿರ ಬಂದು ಅವರ ಪರುಷವೃಷ್ಟಿಯಿಂದ ಸುಖಿಗಳಾಗುತ್ತಿದ್ದರು. 'ಸಿದ್ಧಲಿಂಗೇಶನ ಕೃಪೆಯಿಂದ ಎಲ್ಲ ಸರಿಹೋಗುತ್ತದೆ ಹೆದರಬೇಡಿ, ಎಂದು ಮೂಗಿನ ಮೇಲೆ ಬೆರಳಾಡಿಸಿ ನೋಡಿದರಾಯಿತು. ಕಾರ್ಯವಾದಹಾಗೆಯೇ, ಇದೇ ಅವರ ಅಭಯವಾಣಿ. ಚಿತ್ರದುರ್ಗದ ಜಗದ್ಗುರು

16 ಈಗಿನ ಕನಕಪುರ ಮಠಾಧ್ಯಕ್ಷರಾದ ಶ್ರೀ ಶ್ರೀ ನಿ. ಪ್ರ. ಮಹಾಲಿಂಗಸ್ವಾಮಿಗಳು, ಓ. ಎಸ್. ಲಿಂಗಣ್ಣಯ್ಯ, ಪ್ರೊ॥ ಜಿ. ಮರುಳಸಿದ್ದಯ್ಯ, ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯ ಇನ್ನು ಅನೇಕರು ಅಂದಿನ ಶ್ರೀಗಳವರ ವಿದ್ಯಾರ್ಥಿಗಳ ಮೇಲಿನ ವಾತ್ಸಲ್ಯಾದಿಗಳ ಬಗೆಗೆ ಸ್ವಾರಸ್ಯಕರವಾಗಿ ವಿವರವನ್ನು ಒದಗಿಸುತ್ತಾರೆ. ಇವರೆಲ್ಲ ಉದ್ದಾನೇಶ್ವರರ ಅನುಗ್ರಹಕ್ಕೆ ಪಾತ್ರರಾದ ಮಠದ ಹಳೆಯ ವಿದ್ಯಾರ್ಥಿಗಳೇ ಆಗಿದ್ದಾರೆ.

ಜಯದೇವ ಸ್ವಾಮಿಗಳವರಿಗೆ ಉದ್ದಾನೇಶ್ವರರ ತಪಶ್ಯಕ್ತಿಯ ಅರಿವಾಗಿತ್ತು. ಆಗಾಗ ಮಠಕ್ಕೆ ಬಂದು ಶಿವಯೋಗಿಗಳವರ ಸಂದರ್ಶನ ಪಡೆದು ಹೋಗುವ ಪದ್ಧತಿ. ಉದ್ದಾನೇಶ್ವರರ ಕೊನೆಗಾಲದಲ್ಲಿ ಜಯದೇವ ಸ್ವಾಮಿಗಳು ನೇರವಾಗಿ ಹಳೆಯ ಮಠಕ್ಕೆ ಹೋಗಿ ಉದ್ದಾನೇಶ್ವರರನ್ನು ಸಂದರ್ಶಿಸಿ ಹೋದರು. ದೇಗುಲ ಮಠದ ಮಹಾ ಶಿವಯೋಗಿಗಳಾದ ನಿರ್ವಾಣ ಸ್ವಾಮಿಗಳು ಉದ್ದಾನ ಶಿವಯೋಗಿಗಳ ಅದ್ಭುತ ಶಕ್ತಿಗೆ ಮಾರು ಹೋಗಿ ಆಗಾಗ ಬಂದು ದರ್ಶನಾಶೀರ್ವಾದ ಪಡೆಯುತ್ತಿದ್ದರು. ಹೀಗೆ ಅನೇಕ ಶಿವಯೋಗಿಗಳವರು ಉದ್ದಾನೇಶ್ವರರ ಸಂದರ್ಶನ ಮಾರ್ಗದರ್ಶನ ಪಡೆಯುತ್ತಿದ್ದರು. ತಮ್ಮ ಮಠದ ಉತ್ತರಾಧಿಕಾರಿಯ ಪ್ರಶ್ನೆ ಬಂದಾಗ ಕನಕಪುರದ ನಿರ್ವಾಣಿ ಸ್ವಾಮಿಗಳು ಉದ್ದಾನ ಶಿವಯೋಗಿಗಳ ಹತ್ತಿರಕ್ಕೆ ಬಂದು ನಿಮ್ಮ ಸೇವೆಯಲ್ಲಿರುವ ವಟುವೇ ಬೇಕೆಂದು ಕೇಳಿದರು. ಉದ್ದಾನಶಿವಯೋಗಿಗಳು ಅವರಿಗೆ ತಮ್ಮ ಸೇವೆಯಲ್ಲಿದ್ದ ಪೂರ್ವಾಶ್ರಮದ ಕೆಂಬಳಲ ಕಾಳಪ್ಪನನ್ನು ಅರಿಸಿ ಕಳುಸಿದರು. ಅವರೇ ಮಹಾಲಿಂಗ ಸ್ವಾಮಿಗಳು. ಎಂಬ ಹೆಸರಿಂದ ಕನಕಪುರದ ಮಠವನ್ನು ಬೆಳಗಿಸಿದ ಮಹಾಮಹಿಮರಾಗಿ ಇಂದಿಗೂ ಇದ್ದಾರೆ. ಅವರ ಯಾವ ಸಂಕಲ್ಪವೇ ಆಗಲಿ ಅದು ಯಥಾಯೋಗ್ಯವಾಗಿ ನಡೆದು ಹೋಗುತ್ತಿದೆ.

ಶಿವಯೋಗಿಗಳು ಸಿದ್ಧಲಿಂಗೇಶ್ವರರ ಯಾತ್ರಾ ಮಹೋತ್ಸವ, ರಥೋತ್ಸವ, ದನಗಳ ಪರಿಷೆಯನ್ನು ಮಾಡಬೇಕೆಂಬ ಸಂಕಲ್ಪದಿಂದ ಕೂಡಿದ್ದರು. ಅವರ ಸಂಕಲ್ಪ ಕೇವಲ ಜಾತ್ರೆ ನಡೆದು ಹರಿದುಹೋಗಬೇಕಷ್ಟೇ ಅಲ್ಲ. ಜಾತ್ರೆಗೆಲ್ಲ ದಾಸೋಹದ ವ್ಯವಸ್ಥೆಯಾಗಬೇಕೆಂಬುದು ಏನನ್ನಾದರೂ ಮಾಡಬಹುದು ಇಂಥ ಸಂಕಲ್ಪ ಸುಲಭವಲ್ಲ ಜಾತ್ರೆಗೆಲ್ಲ ಊಟ ಹಾಕುವುದೇನು ಸುಲಭ ಕೆಲಸವೇ? ಆದರೂ ಉದ್ದಾನಶಿವಯೋಗಿಗಳ ಸಂಕಲ್ಪ ಈಡೇರಿ ಹೋಯಿತು. ಇಂದಿಗೂ ಆ ಸಂಕಲ್ಪಕ್ಕೆ ಚ್ಯುತಿ ಬಾರದಿರುವುದನ್ನು ನೋಡಬಹುದು 1909 ರಲ್ಲಿ ಪ್ರಥಮತಃ ಜಾತ್ರೆ ಕೂಡಿತು. ಅಂದಿನ ಅವರ ಆ ಸಂಕಲ್ಪವು ಯಥಾಯೋಗ್ಯವಾಗಿ ಇಂದಿಗೂ ನಡೆದು ಬರುತ್ತಲೇ ಇದೆ. ಇದೊಂದು ಮಹಾ ಅದ್ಭುತವೇ ಸರಿ. ಎಲ್ಲ ವ್ಯವಸ್ಥೆಯನ್ನು ಮಠದವರೇ ಮಾಡಬೇಕೆಂದಲ್ಲ, ಅದು ಸಾಧ್ಯವೂ ಇಲ್ಲ. ತೇರುಕಟ್ಟಲು, ಜಾತ್ರೆಯ ಜನಕ್ಕೆಲ್ಲ 6 7 ಊಟಕ್ಕೆ ಕೊಪ್ಪಲು ನಿರ್ಮಾಣ ಮಾಡಿ, ಅಲ್ಲಿ ಅಡಿಗೆ ಮಾಡಲು ಪ್ರಸಾದ ವಿತರಣೆ ಮಾಡಲು, ವಿವಿಧ ಉತ್ಸವಗಳ ವ್ಯವಸ್ಥೆ ಮಾಡಲು ಒಂದೊಂದು ಊರಿನವರಿಗೆ ಅಂದೇ ನೇಮಿಸಿದರು. ಇಂದಿಗೂ ವಂಶಪಾರಂಪರ್ಯವಾಗಿ ಆ ಜನರೇ ಬಂದು ನಿಂತು 10–15 ದಿನಗಳ ಜಾತ್ರೆ ಮಹೋತ್ಸವದ ಕಾರ್ಯಭಾರವನ್ನು ಹೊತ್ತು ಮುಗಿಸಿ ಹೋಗುತ್ತಿದ್ದಾರೆ. ಹೀಗೆ ಎಲ್ಲೆಲ್ಲೂ ನೇಮ, ಶಿಸ್ತು, ವ್ಯವಸ್ಥೆ ಈ ಕ್ಷೇತ್ರದ ಒಂದು ದೊಡ್ಡ ಆದರ್ಶ ಉದ್ದಾನ ಸ್ವಾಮಿಗಳು ಹಾಕಿಕೊಟ್ಟ ಆದರ್ಶ ಪಾಲನೆ ಇನ್ನೂ ಜನರಿಂದ ನಡೆಯುತ್ತಲೇ ಇದೆ. [ ಮುಂದುವರಿಯುವುದು ]

## ಕೃಷಿ ದಿಗಂತದ ಧ್ರುವತಾರೆ

# ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ

—ಐ. ಸಿ. ಎ. ಆರ್. ದೆಹಲಿ.

ನೀರವವಾದ ಉತ್ತರ ಬಿಹಾರದ ಒಂದು ಪುಟ್ಟ ಪೂಸಾ ಪಟ್ಟಣದಲ್ಲಿ ೭೫ ವರ್ಷಗಳ ಹಿಂದೆ ಒಂದು ಸಂಶೋಧನಾ ಸಂಸ್ಥೆ ಸದ್ದಿಲ್ಲದೆ ಮೊಳೆಯೊಡೆಯಿತು. ಆ ಸಂಸ್ಥೆಯ ಹೆಸರು ಕೃಷಿ ಸಂಶೋಧನಾ ಸಂಸ್ಥೆ. ಪ್ರಕೃತಿಯ ವಿಕೋಪಗಳಿಗೆ ತುತ್ತಾಗಿ ಈ ಸಂಸ್ಥೆ ಮತ್ತೆ ದೆಹಲಿಯಲ್ಲಿ "ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ" ಎಂಬ ಭವ್ಯ ಹೆಸರನ್ನು ಹೊತ್ತು ತನ್ನ ಶಾಖೋಪಶಾಖೆಗಳನ್ನು ಭಾರತದಾದ್ಯಂತ ಬೆಳೆಸಿ ನಮ್ಮ ರೈತರಿಗೆ ವರದಾನವಾಗಿದೆ. ಇದು ಇಂದಿಗೂ ಪೂಸಾ ಎಂದೇ ಪ್ರಸಿದ್ಧಿಪಡೆದಿದೆ. ಪೂಸಾದಲ್ಲಿ ಕೇವಲ ಐದುವಿಭಾಗಗಳೊಂದಿಗೆಪ್ರಾರಂಭವಾದ ಈ ಸಂಸ್ಥೆ ಇಂದು ಸಂಶೋಧನೆಯ ಬೃಹತ್ ವೃಕ್ಷವಾಗಿ 1,200 ಎಕರೆ ಭೂಮಿಯನ್ನು ಆವರಿಸಿದೆ. ಅಮೇರಿಕಾದ ಹೆನ್ರಿ ಫಿಪ್ಸ್ ನೀಡಿದ 30,000 ಡಾಲರುಗಳ ಉದಾರ ಕೊಡುಗೆಯಿಂದ ಈ ಸಂಸ್ಥೆ ಜನ್ಮತಳೆಯಿತು. ಒಂದು ದಿನ ಇದು ಭಾರತದ ಕೃಷಿ ಪಥವನ್ನು ಬದಲಿಸಿ ವಿಶ್ವಮಾನ್ಯ ಸಂಸ್ಥೆಯಾಗುವುದೆಂಬ ಕಲ್ಪನೆಯೂ ಬಹುಶಃ ಪಿಪ್ಸ್‌ಗೆ ಇರಲಿಲ್ಲವೇನೋ !. ಈ ಸಂಶೋಧನಾ ಸಂಸ್ಥೆಯಲ್ಲಿ ತಳಿಶಾಸ್ತ್ರದಿಂದ ಗೊಬ್ಬರದ ಅನಿಲದವರೆಗೆ, ಎತ್ತಿನಗಾಡಿಯಿಂದ ಅಣುಶಕ್ತಿಯ ಬಳಕೆಯವರೆಗೆ ಕೃಷಿ ಸಂಬಂಧ ಸಂಶೋಧನೆಗಳು ನಡೆಯುತ್ತಿವೆ. ಭಾರತದ ಮೂಲೆ ಮೂಲೆಗಳಿಂದ ಬರುತ್ತಿರುವ ಜ್ಞಾನದಾಹಿಗಳಿಗೆ ಯೋಗ್ಯ ತರಬೇತಿ ನೀಡಿ ವಿಶ್ವದಲ್ಲಿ 'ಹಸಿವೆ' ಎಂಬ ರೋಗವನ್ನು ಎದುರಿಸಲು ಕೃಷಿ ಸೇನಾನಿಗಳನ್ನು ಸಿದ್ಧಮಾಡುತ್ತಿದೆ. ಇದು ಇಂದು ಭಾರತದಲ್ಲಿ ಹಿಂದಿನ ನಳಂದ ಅಥವ ತಕ್ಷಶಿಲೆಯ ಮಟ್ಟಕ್ಕೆ ನಿಲ್ಲುವಂಥ ಕೇಂದ್ರವೆಂದರೆ ಅತಿಶಯೋಕ್ತಿಯಾಗಲಾರದು.

ಭಾರತ ಉನ್ನದದೇಶಗಳ ಸಾಲಿನಲ್ಲಿ ಇಂದು ತಲೆಯೆತ್ತಿ ನಿಲ್ಲಬೇಕಾದರೆ ಈ ಸಂಸ್ಥೆಯ ಕೊಡುಗೆ ಅಪಾರ. ಬರೀ ಆಹಾರೋತ್ಪಾದನೆಯನ್ನು ಹೆಚ್ಚಿಸುವುದಷ್ಟೆ ಅಲ್ಲ, ಉಳಿದ ದೇಶಗಳಿಗೂ ಆಹಾರವನ್ನು ರಫ್ತುಮಾಡುವ ಮಟ್ಟಕ್ಕೆ ನಮನ್ನು ತಂದು ನಿಲ್ಲಿಸಿದೆ, ಈ ಸಂಸ್ಥೆ. ಗೋಧಿ ಬೆಳೆಯಲ್ಲಿ ಮಾಡಿದ ಸಾಧನೆಯಂತೂ ವಿಶ್ವಕ್ಕೆ ಎದ್ದು ಕಾಣುವಂಥದ್ದು. ಕಳೆದ ದಶಕದಲ್ಲಿ ೨೦ ಸುಧಾರಿತ ತಳಿಗಳನ್ನು ಬಿಡುಗಡೆ ಮಾಡಿದೆ. ಕಳೆದ ವರ್ಷ 35 ದಶಲಕ್ಷ ಟನ್ ಗೋಧಿ ಉತ್ಪಾದನೆ ಸಾಧ್ಯವಾಗಿದೆ. ಇಂದು ಗೋಧಿ ಇಡೀ ಭಾರತದಲ್ಲೇ ಹಬ್ಬುವಂತಾಗಿದೆ. ಈ ತಳಿಗಳನ್ನು ಬೆಳೆಸಿ ಹೆಚ್ಚು ಉತ್ಪಾದಿಸಿದ ರೈತನಿಗೂ ಅಭಿನಂದನೆ ಸಲ್ಲಬೇಕು. ಮಹತ್ವದ ಇತಿಹಾಸ ಹೊತ್ತ ಉಜ್ವಲ ಭವಿಷ್ಯವಿರುವ ಈ ಸಂಸ್ಥೆ ನಮ್ಮ ರೈತರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸಿದೆ.

# ವಿಜಯನಗರದ ರಾಯರಕಾಲದಲ್ಲಿದ್ದ ಶಿಕ್ಷಣದ ರೀತಿನೀತಿಗಳು.

—ಶ್ರೀ ಎಸ್. ವಿ. ಜೇವೂ

೧೩ ನೆಯ ಶತಮಾನದ ಕೊನೆಗೆ ಮತ್ತು ೧೪ನೆಯ ಶತಮಾನದ ಆರಂಭಕ್ಕೆ ಉತ್ತರದಿಂದ ಬರುತ್ತಿದ್ದ ಮಹಮ್ಮದೀಯರ ದಾಳಿಗಳು ದಕ್ಷಿಣ ಹಿಂದುಸ್ಥಾನವನ್ನು ವ್ಯಾಪಿಸಿ, ಅಲ್ಲಿನ ಸಾಮಾಜಿಕಸಂಸ್ಥೆಗಳನ್ನು ರೀತಿನೀತಿಗಳನ್ನು ಹದಗೆಡಿಸದೆ ಬಿಡಲಿಲ್ಲ. ಧರ್ಮದ ಜೊತೆಜೊತೆಯಾಗಿ ಬೆಳೆದುಬಂದಿದ್ದ, ಶಿಕ್ಷಣ ಪ್ರಗತಿಯೂ ಈ ಪರಿಸ್ಥಿತಿಯ ಮೂಲಕ ಅವನತಿಗೆ ಈಡಾಗಬೇಕಾಯಿತು. ಡಾ॥ ಬಿ. ಎ. ಸಾಲ್ತೊರೆ ಅವರು "ಕ್ರಿ. ಶ. ೧೨೯೬ ನೆಯ ಇಸ್ವಿಯು ಉತ್ತರದ ಮುಸಲ್ಮಾನರ ದಾಳಿಗಳು ಕರ್ನಾಟಕದಲ್ಲಿ ಕಾಲಿಟ್ಟ ಮೊದಲನೆಯ ಕಾಲ ಖಂಡವೆನ್ನಬಹುದು" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಗಂಗಾದೇವಿಯು ( ಕ್ರಿ. ಶ. ೧೩೭೦ ) ತನ್ನ ಕೃತಿಯಾದ "ಮಧುರಾವಿಜಯ"ದಲ್ಲಿ ತನ್ನ ಗಂಡ ಕಂಪಣ್ಣನನ್ನು ಉದ್ದೇಶಿಸಿ ಹೀಗೆ ವರ್ಣಿಸಿದ್ದಾಳೆ.

> ನತಥಾ ಕಟುಘೂತ್ಕೃತಾದ್ ವ್ಯಥಾಮೇ
> ಹೃದಿ ಜೀರ್ಣೋಪವನೇಷು ಘೂಕಲೋಕಾತ್ ।
> ಪಂಶೀಲಿತ ಪಾರಶಿಕ ವಾಗ್ಭಿಃ ।
> ಯವನಾನಾಂ ಭವನೇಯಥಾ ಶಕುಂತ್ಯೈಃ ॥
>
> —ಮಧುರಾವಿಜಯಾಂ.

ಅಂದರೆ " ಯಾವ ಅಗ್ರಹಾರಗಳಲ್ಲಿ ಯಜ್ಞಯಾಗಾದಿಗಳಿಂದ ಹೋಮ ಧೂಮವು ಏಳುತ್ತಿತ್ತೋ, ವೇದಾಧ್ಯಯನ ಸ್ವರವು ಕೇಳಬರುತ್ತಿತ್ತೋ ಅಂಥ ಮಠಗಳಲ್ಲಿ ಮಾಂಸವನ್ನು ಬೇಯಿಸುತ್ತಿರುವ ಹೊಗೆಯು ಹಾಗೂ ನೀಚ ಜನರ ಒದರಾಟ ಚೀರಾಟಧ್ವನಿಯು ಕೇಳಬರತೊಡಗಿದೆ. " ಎಂದು ವರ್ಣಿಸಿದ್ದಾಳೆ.

ಅಲ್ಲಾವುದ್ದೀನ್ ಖಿಲಜಿಯು ದೇವಗಿರಿಗೆ ಕ್ರಿ. ಶ. ೧೨೯೪ರಲ್ಲಿ ದಾಳಿಯಿಟ್ಟಾಗ ದಕ್ಷಿಣ ಭಾರತದಲ್ಲಿ ಯಾವತರದ ಸ್ವಾಸ್ಥ್ಯಯೂ ಉಳಿದಿರಲಿಲ್ಲ. ಎಲ್ಲವೂ ಹದಗೆಟ್ಟು ಹಾಳಾಗಿಹೋಗಿತ್ತು ಮಲ್ಲಿಕಾಪುರನು ಕ್ರಿ. ಶ. ೧೩೧೦ ರಲ್ಲಿ ದೋರ ಸಮುದ್ರವನ್ನು ಹಾಳುಗೆಡವಿದನು. ಮುಂದೆ ಮಹಮದ್ ಬಿನ್ ತೊಗಲಖನು ದೇವಗಿರಿಯನ್ನು ನುಚ್ಚುನುರಿ ಮಾಡಿದನು. ಪುಡಿಪುಡಿಗೊಳಿಸಿದನು. ವಿಜ್ಞಾನ ಮತ್ತು ಕಲೆಗಳಲ್ಲಿ

ಅವನೊಬ್ಬ ಪರಿಣತವ್ಯಕ್ತಿಯಾಗಿದ್ದರೂ ಕೆಲವುಸಾರಿ ಅವನ ವಿಚಿತ್ರಸ್ವಭಾವದ ಮೂಲಕ ವಿದ್ವಜ್ಜನರು ಮತ್ತು ಪವಿತ್ರಸ್ಥಳಗಳು ಸಂಕಟಕ್ಕೆ ಒಳಗಾದವು.[1] ಅದರಿಂದ ಸಾಮಾಜಿಕ ಪರಿಸ್ಥಿತಿಯು ತಳಬುಡವಿಲ್ಲದ್ದಾಯಿತು. ಎಲ್ಲವೂ ಯವನರ ದಾಳಿಗೆ ಆಹುತಿಯಾದವು. ಗಂಗಾದೇವಿಯು ತನ್ನ "ವೀರ ಕಂಪಣರಾಯಚರಿತ್ರೆ" ಯಲ್ಲಿ "ಗಿಳಿಗಳೂಸಹ ಉರ್ದುಭಾಷೆಗೆ ಮೆಚ್ಚಿ ಆ ಭಾಷೆಯನ್ನೇ ಮಾತಾಡತೊಡಗಿದವು" ಎಂದು ವರ್ಣಿಸಿ "ಇಂಥ ಹೃದಯ ವಿದ್ರಾವಕ ಸ್ಥಿತಿಯು ಇನ್ನೊಂದಿಲ್ಲ" ಎಂದು ಆಗಿನಕಾಲದ ಪರಿಸ್ಥಿತಿಯ ಚಿತ್ರಣ ಕೊಟ್ಟಿದ್ದಾಳೆ.

ಇಂಥವೆಲ್ಲ ತೊಂದರೆಗಳಿಂದ ಭಾರತೀಯ ಸಂಸ್ಕೃತಿಯು ಗಂಡಾಂತರಕ್ಕೆ ಸಿಕ್ಕು ಹೇಳಹೆಸರಿಲ್ಲದ ಹೊತ್ತು ಪ್ರಾಪ್ತವಾಗಿತ್ತು. ಸಂಗಮನ ಐವರು ಮಕ್ಕಳು ಈ ಮುಸಲ್ಮಾನರ ದಾಳಿಗಳನ್ನು ಹತ್ತಿಕ್ಕುವುದಕ್ಕಾಗಿ ಒಂದು ಪ್ರಬಲವಾದ ರಾಜ್ಯವನ್ನೇ ಸ್ಥಾಪಿಸಬೇಕೆಂದು ಹುರಿದುಂಬಿದವರಾಗಿದ್ದರು. ಇವರಿಗೆ ವಿದ್ಯಾರಣ್ಯರೂ, ಕಾಶಿ ಕ್ರಿಯಾವಿಲಾಸ ಶಕ್ತಿಯರು ಗುರುಗಳಾದರು. ಶೃಂಗೇರಿಯು ರಾಜ್ಯತಂತ್ರಕ್ಕೂ ಧಾರ್ಮಿಕ ಕಾರ್ಯಕ್ಕೂ ಕೇಂದ್ರಸ್ಥಾನವಾಗಿ ಪರಿಣಮಿಸಿತು. ವಿದ್ಯಾರಣ್ಯರ ಪ್ರಯತ್ನದಿಂದ ಶೃಂಗೇರಿಯು ರಾಜ್ಯದಲ್ಲಿಯೇ ಒಂದು ಚಿಕ್ಕರಾಜ್ಯವಾಗಿತ್ತು. ಅದರ ಗುರುಗಳೇ ರಾಜರುಗಳಾಗಿದ್ದರು; ರಾಜಮರ್ಯಾದೆಯುಳ್ಳವರಾಗಿದ್ದರು. ಈ ಕಾಲದಲ್ಲಿ ಬಿರುದು, ಮಾನ ಮರ್ಯಾದೆಗಳು ಹೆಚ್ಚಾಗತೊಡಗಿದವು. ಅಗ್ರಹಾರಗಳು, ಗುಡಿಗಳು, ದಾನದತ್ತಿಗಳು, ಪೂಜೆಪುನಸ್ಕಾರಗಳು ತಲೆದೋರಿ ಸಮಾಜದಲ್ಲಿ ಒಂದುತರದ ಪ್ರಭಾವವನ್ನೇ ಬೀರಿದವು. ಕೇವಲ ಕಲಿಯುವಿಕೆ, ಅಭ್ಯಾಸ, ಧ್ಯಾನ, ತಪಸ್ಸಿನ ಪ್ರಶಾಂತ ಕೇಂದ್ರವಾಗಿರದೆ, ಕಂದಾಯ ಸಂಗ್ರಹಿಸುವ ಮತ್ತು ರಾಜ್ಯದ ಎಲ್ಲಾ ಕಾರ್ಯಗಳ ವ್ಯವಸ್ಥೆಯನ್ನು ಮಾಡುವ ಅಧಿಕಾರಿಗಳಿಂದ ಕೂಡಿದ ರಾಜ್ಯವಾಗಿತ್ತು.[2] ಸಾಮ್ರಾಜ್ಯವು ಪ್ರಗತಿಪಥದಲ್ಲಿ ನಿಧಾನವಾಗಿ ಮುಂದುವರಿದಂತೆ ಧಾರ್ಮಿಕಬೆಂಬಲ ಅಥವಾ ಆಧ್ಯಾತ್ಮಿಕ ಸಂಪನ್ನರಾದ ಗುರುಗಳ ಸಹಾಯದ ನೆರವು ಎಷ್ಟು ಆದರ್ಶವೆನಿಸಿತೋ ಅಷ್ಟೇ ರಾಜ್ಯದ ಸೈನಿಕರ ಸಂರಕ್ಷಣೆಯೂ ಅತ್ಯಗತ್ಯದ್ದಾಯಿತು.

ವಿಜಯನಗರದ ರಾಯರ ಕಾಲದಲ್ಲಿ ಶಿಕ್ಷಣವು ಬಹಳ ಪ್ರಗತಿಪರವಾಗಿತ್ತು. ಅಸಂಖ್ಯಾತ ದಾನದತ್ತಿ ಮೊದಲಾದುವುಗಳ ಮೇಲಿಂದ ಶಿಕ್ಷಣಕಾರ್ಯವು ಬಹು ದೊಡ್ಡ ಪ್ರಮಾಣದಿಂದ ಮುಂದುವರೆದಿತ್ತು. ಮಠ ಗುಡಿ ಮತ್ತು ಇನ್ನಿತರ ವಿದ್ಯಾ ಕೇಂದ್ರಗಳಲ್ಲಿ ಸಾಹಿತ್ಯಕರು ಸಾಮಾನ್ಯವಾಗಿ ನೆಮ್ಮದಿಪೂರ್ವಕವಾದ ಜೀವನವನ್ನು ಕಳೆಯುತ್ತಿದ್ದರು. ವಿಜಯನಗರದ ರಾಜರು ಪ್ರಗತಿಪರ ವಿಚಾರಗಳಿಂದ ಕೂಡಿದ್ದವ

1 ಎ. ಫರಗಾಟನ್ ಎಂಪಾಯರ್ ಪು. ೧೨.

2 ವಿಜಯನಗರ ಸೆಕ್ಸ್ ಸೆಂಚುಸರಿ ಕಮೆಮೊರೇಷನ್ ವ್ಯಾಲ್ಯುಂ - ಪು. ೧೬೭.

ರಾಗಿದ್ದುದರಿಂದ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳು ಬೆಳೆದು ಬಾಳತೊಡಗಿದವು. "ಪೂರ್ವದ ಮರ್ಯಾದೆ"ಯನ್ನು ಕಾಯ್ದುಕೊಳ್ಳಬೇಕೆಂಬ ಉದ್ದೇಶವನ್ನು ಅವರು ಇಟ್ಟುಕೊಂಡಿದ್ದರು. ತಮ್ಮ ಘನೋದ್ದೇಶವನ್ನು ಸಾಧಿಸುವುದಕ್ಕಾಗಿ ಪ್ರತಿಯೊಂದು ಜಾತಿಯ ಜನರಿಗೆ ಮತ್ತು ಎಲ್ಲತರದ ಶೈಕ್ಷಣಿಕ ಸಂಸ್ಥೆಗಳಿಗೆ ನೆರವನ್ನು ನೀಡುತ್ತಿದ್ದರು.

ಈ ಕಾಲದಲ್ಲಿ ಶೃಂಗೇರಿಯು ಜ್ಞಾನಕ್ಕಾಗಿ ಬಹು ಎತ್ತರಮಟ್ಟದ ಕೇಂದ್ರ ಸ್ಥಾನವೆನಿಸಿತ್ತು. ರಾಜ್ಯದೊಳಗಿನ ಜ್ಞಾನ ಲಾಲಸೆಯುಳ್ಳವರೆಲ್ಲರೂ ತಮ್ಮ ಜ್ಞಾನ ತೃಷೆಯನ್ನು ತಣಿಸಿಕೊಳ್ಳುವುದಕ್ಕಾಗಿ ಶೃಂಗೇರಿಯ ಕಡೆಗೆ ಧಾವಿಸುತ್ತಿದ್ದರು. ಅದು ಈಗಿನಂಥ ವಿಶ್ವವಿದ್ಯಾನಿಲಯದ ಮಟ್ಟದ ಸ್ಥಾನವಾಗಿಯೇ ಪರಿಣಮಿಸಿತ್ತೆನ್ನಬಹುದು. ಅಲ್ಲಿ ಅರಸರು ಸಾಮಾನ್ಯ ಜನರನ್ನು ಈಗಿನ ಉಪಕುಲಪತಿಗಳು ಕಾಣುತ್ತಿರುವಂತೆ ಕಾಣುತ್ತಿದ್ದರು. ಅವರೂ ಜನಗಳಲ್ಲಿ ಬೆರೆತುಕೊಳ್ಳುತ್ತಿದ್ದರು. ಹಳೆಯ ಗುಡಿಗಳು ಮತ್ತು ಮಠಗಳು ಸಣ್ಣ ಪ್ರಮಾಣದಲ್ಲಿಯೇ ಈ ಕಾರ್ಯವನ್ನು ಸಾಧಿಸುತ್ತಿದ್ದವು. ಇವುಗಳು (ಗುಡಿಗಳು ಮತ್ತು ಮಠಗಳು) ಅರಸರು ಮತ್ತು ಪ್ರಜೆಗಳು ಕೂಡುವ ಸಾಮಾನ್ಯ ಸ್ಥಳಗಳಾಗಿದ್ದವು.[3] ಇಬ್ಬರಲ್ಲಿ ಪರಸ್ಪರ ನಿಷ್ಕಪಟ ಪ್ರೇಮ, ಮತ್ತು ಸೌಹಾರ್ದಗಳ ಸಂವರ್ಧನೆಗೆ ಅವಕಾಶ ಕಲ್ಪಿಸುತ್ತಿದ್ದವು. ಇಂಥ ಸ್ಥಾನದ ಅಧಿಕಾರಿಗಳಾಗಿರುವವರಂತೂ, ಪಂಡಿತರೇ ಆಗಿರುತ್ತಿದ್ದರು. ಅವರು ವೇದಗಳಿಗೆ ಭಾಷ್ಯಗಳನ್ನು ಬರೆದು ಪ್ರಕಟಿಸಿದರು. ಮಾಧವ ಎಂಬುವರು ಸಂಚಾರೀ ವಿಶ್ವಕೋಶವೇ ಆಗಿದ್ದರು. ಶಬ್ದಗಳ ಸರಿಯಾದ ಉಚ್ಚಾರಣೆಯ ಮೇಲೆ ಅವರು ಕೊಟ್ಟಿರುವ ಮಹತ್ವದ ಮೇಲಿಂದ ಅವರು ಶಿಕ್ಷಣದ ಸರಿಯಾದ ಪದ್ಧತಿಯ ಸಂಬಂಧವಾಗಿ ವ್ಯಕ್ತಪಡಿಸುವ ವಿಚಾರವು ಸ್ಪಷ್ಟವಾಗುತ್ತದೆ.

೧ ನೆಯ ಬುಕ್ಕ ಮತ್ತು ೧ ನೆಯ ಹರಿಹರರ ರಾಜ್ಯಾಡಳಿತದ ಕಾಲಕ್ಕೆ ವಿದ್ಯಾತೀರ್ಥರು ಅಪ್ರತಿಮ ಪಂಡಿತರಾಗಿದ್ದರು. ಅವರು ಶೃಂಗೇರಿಯಲ್ಲಿರುತ್ತಿದ್ದರು. ಅವರಿಗೆ ಸಾಯಣ, ಭಾರತೀತೀರ್ಥ, ವಿದ್ಯಾರಣ್ಯ ಮತ್ತು ಮಾಧವಾಚಾರ್ಯರೆಂಬುವರು ಶಿಷ್ಯರಾಗಿದ್ದರು. ರಾಯರು ಶೃಂಗೇರಿಗೆ ಆಗಮಿಸಿ ಗುರುಗಳಿಗೆ ರಾಜಮರ್ಯಾದೆಯನ್ನು ಸಲ್ಲಿಸಿ, ಅವರ ಸಲಹೆ, ಸೂಚನೆ, ಉಪದೇಶದಂತೆ ಯಾವ ಯಾವ ವಿದ್ಯಾಸಂಸ್ಥೆಗಳಿಗೆ ದಾನದತ್ತಿಗಳನ್ನು ಬಿಡಬೇಕೆಂಬುದನ್ನು ವಿಚಾರಮಾಡಿಕೊಂಡು ಬರುತ್ತಿದ್ದರು. ವಿಜಯನಗರ ರಾಜ್ಯವೇ ನಷ್ಟಪ್ರಾಯವಾದಮೇಲೆ, ಶೃಂಗೇರಿಯು ಕೆಳದಿಯ ನಾಯಕರಿಂದ ರಾಜಮರ್ಯಾದೆ ಹಾಗು ಪೋಷಣೆಯನ್ನು ಪಡೆಯಿತು.

ಸಕಲ ವರ್ಣಾಶ್ರಮ ಧರ್ಮಗಳ ಬೆಳವಣಿಗೆಯನ್ನು ಮಾಡುವ ಉದ್ದೇಶವೇ ಸಾಮಾನ್ಯ ರೀತಿಯಾಗಿತ್ತು. ಬುಕ್ಕರಾಜನು ಶ್ರೀ ವೈಷ್ಣವ ಮತ್ತು ಜೈನರನಡುವೆ

---

3 ವಿಜಯನಗರ ಸೆಕ್ಸೆಂಚುರಿ ಕಮ್ಮೆಮೊರೇಷನ್ ವಾಲ್ಯೂಂ ಪು. ೧೬೨

ನಡೆದ ಕಲಹವನ್ನು ಕ್ರಿ.ಶ. ೧೩೬೮ರಲ್ಲಿ ತೀರಿಸಿದ ಉದಾಹರಣೆಯೇ ಇದಕ್ಕೆ ಸಾಕ್ಷಿಯಾಗಿನಿಂತಿದೆ. ವಿಜಯನಗರದ ಅರಸರ ಕಾಲದಲ್ಲಿ ಲಿಂಗಾಯತ ಪಂಡಿತರೊಬ್ಬರಿಗೆ "ಅನೇಕಾಂತ ಮತಗಳೊಡನೆ ಹೋರಾಡುವವರು"[4] ಎಂಬ ಬಿರುದಿತ್ತು. ಈ ಉದಾಹರಣೆಯಿಂದ ಆ ಕಾಲದ ಜನರ ಉದಾರಮನಸ್ಸು ಹೇಗಿತ್ತೆಂಬುದನ್ನು ತೋರಿಸಿಕೊಡುತ್ತದೆ. ಅರಸರು ಧರ್ಮ ಧರ್ಮಗಳ ನಡುವೆ ಯಾವ ಭೇದವನ್ನು ಮಾಡುತ್ತಿರಲಿಲ್ಲ. ಆದರೂ ಕೊನೆ ಕೊನೆಯ ಅರಸರು ವೈಷ್ಣವಧರ್ಮದ ಬಗೆಗೆ ಹೆಚ್ಚು ಮನಸ್ಸುಳ್ಳವರಾಗಿದ್ದರು. ಆದಕಾರಣ ಶೈಕ್ಷಣಿಕ ಸಂಸ್ಥೆಗಳು ಯಾವುದೇತರದ ತೊಂದರೆಗಳಿಗೆ ಈಡಾಗದೆ ಸರಳವಾಗಿ ಬೆಳೆದು ಬಂದವು.

ಈ ಕಾಲದ ಸಾಹಿತ್ಯನಿರ್ಮಿತಿಯ ಮೇಲಿಂದ ಸಾಮಾನ್ಯಜನತೆಗೆ ವಿಶಾಲ ದೃಷ್ಟಿಯಿಂದ ಶಿಕ್ಷಣವು ಕೊಡಲ್ಪಡುತ್ತಿತ್ತೆಂಬುದು ಸ್ಪಷ್ಟವಾದ ಮಾತಾಗಿದೆ. ಮಧ್ಯಮ ತರಗತಿಯ ಜನತೆಯು ಕೇವಲ ಮನಸ್ಫೂರ್ತಿ ವಿದ್ಯೆಯನ್ನಷ್ಟೇ ಕಲಿತುಕೊಂಡು ಪಾರಂಗತರಾಗಬೇಕೆಂದು ಬಯಸುತ್ತಿರಲಿಲ್ಲ. ವಿದಾಭ್ಯಾಸದ ಜೊತೆಗೆ ಕಾಯಕದ ಉದ್ಯೋಗವನ್ನು ಕಲಿಯದೆ ಅವರು ಇರುತ್ತಿರಲಿಲ್ಲ. ವಿಜಯನಗರ ರಾಜರ ಉಚ್ಛ್ರಾಯಕಾಲದಲ್ಲಿ ಅಲ್ಲಿಯ ವ್ಯಾಪಾರವು ದೊಡ್ಡಪ್ರಮಾಣದಿಂದ ನಡೆಯುತ್ತಿತ್ತು. ಸೆಟ್ಟಿಗಳೇ ಆ ಕಾಲದ ವ್ಯಾಪಾರಸ್ತರಾಗಿ, ತಮ್ಮ ಉದ್ಯೋಗವನ್ನು ಒಳ್ಳೆಯ ಶಿಸ್ತಿನಿಂದ ಸಾಗಿಸುತ್ತಿದ್ದರು. ಈ ವ್ಯಾಪಾರಸ್ಥರು ತಮ್ಮ ಮಕ್ಕಳಿಗೆ ಮೂರು ಮುಖ್ಯವಾದ ಓದುವುದು ಬರೆಯುವುದು, ಗಣಿತಗಳ ಜ್ಞಾನವಾಗುವ ವಿದ್ಯೆಯನ್ನು ಕಲಿಸುತ್ತಿದ್ದರು. ಈ ಸೆಟ್ಟಿಗಳು ವ್ಯಾಪಾರಸ್ಥರಾದ್ದರಿಂದ ತಮ್ಮ ಜಾತಿಯ ಹಾಗು ತಾವಿರುವ ಊರುಗಳಲ್ಲಿಯ ಪ್ರತಿಷ್ಠಿತ ಜನರಾಗಿರುತ್ತಿದ್ದರು. ತಾವು ಇತರರ ಮಕ್ಕಳಿಗೆ ಎಂಥವಿದ್ಯೆಯು ಸಿಗುತ್ತಿತ್ತೆಂಬುದನ್ನು ತಿಳಿಯಬೇಕಾದರೆ "ಬಾರ್ಬೋಸಾ" ನ ವರ್ಣನೆಯನ್ನು ನೋಡಬೇಕು, ಅಂದರೆ ತಿಳಿದುಬರುವುದು.[5] "ಅವರ ಕಿವಿಗಳಲ್ಲಿಯ ತೂತುಗಳು ಬಹಳ ಅಗಲವಾಗಿ ಒಂದೊಂದು ಸಣ್ಣತತ್ತಿಯು ಹಿಡಿಸಬಹುದಾಗಿತ್ತು. ಅವರು ತಮ್ಮ ಎದೆಯಮೇಲೆ ಹಾಕಿಕೊಂಡು ಒಯ್ಯುತ್ತಿದ್ದ ಸಂಚಿಗಳಲ್ಲಿ ಬಂಗಾರ ತೂಗುವ ತ್ರಾಸು ಹಾಗೂ ಕಲ್ಲು (ತೂಕದ ಬಟ್ಟು)ಗಳನ್ನು, ಬೆಳ್ಳಿಯನಾಣ್ಯ, ಹರಳು ಕಲ್ಲುಗಳನ್ನು ಇಡುತ್ತಿದ್ದರು. ಇವರ ಮಕ್ಕಳಾದರೋ ೧೦-೧೨ ವರ್ಷದವರಾಗುತ್ತಲೇ ತಮ್ಮ ಹಿರಿಯರಿಂದ ನಡೆದುಬಂದ ಉದ್ಯೋಗದಲ್ಲಿ ನಿರತರಾಗುತ್ತಿದ್ದರು. ಅವರು ಚಿಕ್ಕ ಚಿಕ್ಕ ನಾಣ್ಯಗಳ ಬದಲಾವಣೆಯನ್ನು ಮಾಡುತ್ತ ಅತ್ತಿತ್ತ ಸಂಚಾರ ನಡೆಸುತ್ತಿದ್ದರು.

---

4 ಮಿಡಿವಾಲ್ ಜೈನೀಜಂ ಪು. ೨೬೩.

5 ಸೋ. ಅಂಡ್ ಪೊ. ಲೈಫ್ ಇನ್ ದಿ. ವಿಜಯನಗರ ಎಂಪೈರ್ II ಪು. 34. ಎ. ಕರ್ನಾಟಕಾ GV 341 ಪು. 142.

ಅವರು ಜಾಣ ಲೆಕ್ಕಿಗರೂ ಒಳ್ಳೆಯ ಕಾರಕೂನರೂ ಆಗಿದ್ದರು. ಇವರು ತಮ್ಮ ಲೆಕ್ಕಾಚಾರವನ್ನು ಕೈಬೆರಳುಗಳಮೇಲಿಂದ ಮಾಡುವಷ್ಟು ಜಾಣರಾಗಿದ್ದರು." ವರ್ಣನೆಯ ಮೇಲಿಂದ ತಿಳಿದುಬರುವುದೇನೆಂದರೆ, ಈ ವ್ಯಾಪಾರಸ್ಥರ ಮಕ್ಕಳಿಗೆ ಪುಸ್ತಕೀಯ ಜ್ಞಾನವೂ ಶಾಲೆಗಳಲ್ಲಿ ದೊರೆಯುತ್ತಿದ್ದಿಲ್ಲವೆಂಬ ಮಾತು ತಿಳಿದು ಬರು ವುದು. ಅವರಿಗೆ ಮೇಲೆ ಹೇಳಿದ ಮೂರು ಅಂದರೆ ಓದು, ಬರೆಹ ಗಣಿತಗಳೂ, ಸಾಮಾನ್ಯ ಮತ್ತು ಮುಖ್ಯಮಾತುಗಳ ತಿಳುವಳಿಕೆ, ಮತ್ತು ದೇಶೀಯ ಜಮಾಖರ್ಚಿನ ಪದ್ಧತಿ, ಮೊದಲಾದವುಗಳ ಜ್ಞಾನವು ಅವರ ಹಿರಿಯರಿಂದಲೇ ದೊರೆಯುತ್ತಿತ್ತು. ಆ ಕಾಲದ ವ್ಯಾಪಾರಸ್ಥರ ಮಕ್ಕಳು ಕೈಬೆರಳಿನಮೇಲಿಂದ ಲೆಕ್ಕಾಚಾರವನ್ನು ಮಾಡುತ್ತಿದ್ದಂತೆ ಈಗಲೂ ಅವರ ಬಳಗದವರು ಹಾಗೆಯೇ ಲೆಕ್ಕಾಚಾರಮಾಡುವ ರೂಢಿಯನ್ನು ಬೆಳೆಸಿಕೊಂಡು ಬಂದಿದ್ದಾರೆಂಬುದು ನಮ್ಮ ಲಕ್ಷ್ಯ ಸೆಳೆಯುವುದು.

ಇನ್ನೊಂದು ಜಾತಿಯೆಂದರೆ ವೀರಪಾಂಚಾಳರದು. ಅದು ಸಾಮಾಜಿಕ ಕಾರ್ಯ ಮಾಡುವುದರಲ್ಲಿ ಒಂದುತರಹದ ವಿಶಿಷ್ಟತರಗತಿಯ ಸ್ಥಾನವನ್ನು ಗಳಿಸಿಕೊಂಡಿತ್ತೆಂದು ಹೇಳಬಹುದು ಕ್ರಿ. ಶ. ೧೩೭೦ನೆಯ ಇಸ್ವಿಯ ಶಿಲಾಶಾಸನವು ತೆರಕಣಾಂಬಿಯ ವೀರಪಾಂಚಾಳರ ಬಗ್ಗೆ ಹೇಳುವುದೇನೆಂದರೆ—"...... ಎಲ್ಲ ವೀರ ಪಾಂಚಾಳರು.... ತೂಗುವುದರಲ್ಲಿಯೂ, ಬಾಯುಗೂಡಿಸಿ ಲೆಕ್ಕಾಚಾರ ಮಾಡುವುದರಲ್ಲಿಯೂ, ವೇದಗಳಲ್ಲಿಯೂ, ಶಾಸ್ತ್ರೀಯ ವಿಷಯ, ತರ್ಕ, ವ್ಯಾಕರಣ, ಕಾವ್ಯ, ತಾಲುವರ್ಣ, ಓಷ್ಠ್ಯವರ್ಣಗಳನ್ನು ನಿಚ್ಚಳವಾಗಿ ಉಚ್ಚರಿಸುವುದು; ಆನೆ, ಕುದುರೆಗಳನ್ನು ಸಾದುಮಾಡುವುದು (in holding breath Charged with Perfume), ಸುವಾಸನೆಯಿಂದ ತುಂಬಿದ ಉಸಿರನ್ನು ಕಟ್ಟುವುದು; ಓದು, ಬರೆಹ, ಅಂಕಗಣಿತ, ಮಾಟಮಾಡುವುದು ಇವೆಲ್ಲವುಗಳಿಂದ ಕೂಡಿದ ಕುಶಲ ಬುದ್ಧಿಯುಳ್ಳ ಜನರು ... ಅಪರೂಪವಾದ ಮಲ್ಲಿಗೆಯಿಂದ ಸರಸ್ವತಿಯನ್ನು ಸುವಾಸಿತಳನ್ನಾಗಿ ಮಾಡುವವರು; ಸರಸ್ವತಿಯ ಕಿವಿಗೆ ಭೂಷಣರಾದವರು" ಈ ವರ್ಣನೆಯು ವೀರಪಾಂಚಾಳರಲ್ಲಿದ್ದ ಕೌಶಲ್ಯ, ಸಾಹಿತ್ಯದಲ್ಲಿದ್ದ ಪ್ರಾವೀಣ್ಯತೆಯ ಬಗೆಗೆ ಸ್ಪಷ್ಟ ಕಲ್ಪನೆಯನ್ನು ಮಾಡಿಕೊಡುತ್ತದೆ. ...... ತಾಲವ್ಯ ಮತ್ತು ಓಷ್ಠ್ಯವರ್ಣದ ಉಚ್ಚಾರಣೆಯ ಬಗೆಗೆ ಅವರಲ್ಲಿದ್ದ ಆಸ್ಥೆಯನ್ನು ಕಂಡರೆ ಸ್ವರಶಾಸ್ತ್ರದ ಅಭ್ಯಾಸವನ್ನು ಆಳವಾಗಿಮಾಡುತ್ತಿದ್ದರೆಂಬ ಸಂಗತಿಯು ಸ್ಪಷ್ಟವಾಗಿ ತಿಳಿದುಬರುವುದು.

ಶಿಕ್ಷಣವು ದೇಶದಲ್ಲಿರುವ ಶಾಂತತೆಯ ಕಾಲದಲ್ಲಿ ನಿರ್ಬಾಧಿತವಾಗಿ ಬೆಳೆಯಲವಕಾಶವುಂಟು. ವಿಜಯನಗರದ ರಾಜರ ಕಾಲದಲ್ಲಿ ಶಾಂತವಾದ ಪರಿಸ್ಥಿತಿಯಿದ್ದುದರಿಂದ ಆ ಕಾಲದಲ್ಲಿ ಶಿಕ್ಷಣವು ಚೆನ್ನಾಗಿ ಪ್ರವರ್ಧಮಾನವಾಯಿತು. ಸಾರ್ವಜನಿಕರು ಹಳ್ಳಿಗಳಲ್ಲಿರುವ ಅಗ್ರಹಾರಗಳಿಗೆ ದಾನಗಳನ್ನು ನೀಡಲು ಸದಾ ಸಿದ್ಧ

ರಾಗಿರುತ್ತಿದ್ದರು. ಕ್ರಿ.ಶ. ೧೫೭೬ ರಲ್ಲಿ ಬಾಯಪ್ಪನಾಯಕನ ಮಗನಾದ ಕೃಷ್ಣಪ್ಪ ನಾಯಕನು ಗಳಿಗೆಕೆರೆ ಅಗ್ರಹಾರಕ್ಕೆ ಭೂಮಿಯ ಕಾಣಿಕೆಯನ್ನು ಸಲ್ಲಿಸಿ, ರಾಮಪುರ ಅಗ್ರಹಾರವೆಂದು ಹೆಸರಿಟ್ಟು ಭೂಮಿಯ ಪೂಜ್ಯಫಲವು ತನ್ನ ತಾಯಿಗೆ ಸಲ್ಲಲಿ ಎಂದು ವಿಚಾರಿಸಿ ದತ್ತಿಯನ್ನು ಕೊಟ್ಟ ಉದಾಹರಣೆಯುಂಟು.[6] ಕ್ರಿ.ಶ. ೧೫೭೧ ರ ಶಿಲಾಶಾಸನವೊಂದರಲ್ಲಿ ಮಹಾಮಂಡಳೇಶ್ವರನೊಬ್ಬನು ಒಡೆಯರ ಮಠವೆಂಬುದಕ್ಕೆ ಕಾಣಿಕೆಕೊಟ್ಟು ಅದರ ಪುಣ್ಯವು ತನ್ನ ತಂದೆಗೆ ಲಭಿಸಲಿ ಎಂದು ಹಾರೈಸಿದ್ದಾನೆ.[7] ಅದೆಷ್ಟೋಜನರು ಈ ಬಗೆಯಾಗಿ ಕೊಟ್ಟದಾನಗಳಿಂದ ನಡೆಸಲ್ಪಡುತ್ತಿದ್ದ ಅಗ್ರಹಾರಗಳನ್ನು ದುರಸ್ತುಮಾಡುವ ಪುಣ್ಯದಕೆಲಸಗಳನ್ನು ಮಾಡುತ್ತಿದ್ದರು. ಕ್ರಿ.ಶ. ೧೫೯೧ ರಲ್ಲಿ ಇಮ್ಮಡಿ ಅರಸಪ್ಪನಾಯಕನು ಕೋಡೀಕೊಪ್ಪದಲ್ಲಿರುವ ಅಗ್ರಹಾರವನ್ನು ದುರಸ್ತಗೊಳಿಸಿ ಅದರ ಪುಣ್ಯವು ತನ್ನ ತಾಯಿಗೆ ಲಭಿಸಲೆಂದನು.[8] ಆರ್ಥಿಕ ಅನುಕೂಲತೆಯುಳ್ಳ ಎಷ್ಟೋ ಜನರು ಕೆಲವಾರು ಹಳ್ಳಿಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತನಗೊಳಿಸಿದರು. ಕ್ರಿ.ಶ. ೧೬೧೫ ರಲ್ಲಿ ವಿಠ್ಠಪ್ಪನೆಂಬುವನು ತನ್ನ ತಾಯಿಯ ಸ್ಮರಣಾರ್ಥವಾಗಿ ಈ ರೀತಿ ಮಾಡಿದನು. ಇದರಂತೆ ಸ್ತ್ರೀಯರುಕೂಡ ಮಾಡಿದ ಪುಣ್ಯದ ಕೆಲಸಗಳ ಬಗೆಗೆ ಅದೆಷ್ಟೋ ಉದಾಹರಣೆಗಳಿವೆ. ಕ್ರಿ. ಶ. ೧೫೯೯ ರಲ್ಲಿ ವೆಂಕಟಕೃಷ್ಣಾಜಮ್ಮ ಎಂಬ ಒಬ್ಬ ಸ್ತ್ರೀಯು ಒಂದು ಅಗ್ರಹಾರವನ್ನು ಪ್ರತಿಷ್ಠಾಪಿಸಿ ಅದರ ಆಗುಹೋಗುಗಳ ಉಸ್ತುವಾರಿಗೆ ಒಂದು ಹಳ್ಳಿಯನ್ನು ಕಾಣಿಕೆ ಕೊಟ್ಟು ಅದರ ಪುಣ್ಯವು ತನ್ನ ಮಾವನಿಗೆ ಸಲ್ಲಲೆಂದಿದ್ದಾಳೆ.[9] ಇಂಥವೇ ಅನೇಕ ಉದಾಹರಣೆಗಳನ್ನು ಇಲ್ಲಿ ಕೊಡಬಹುದಾಗಿತ್ತು. ಅನವಶ್ಯಕವೆಂದು ಕೈಬಿಡಲಾಗಿದೆ. ಇಲ್ಲಿ ಉದಾಹರಿಸಿದ ಕೆಲವೇ ಉದಾಹರಣೆಗಳ ಮೇಲಿಂದ ನಮಗೆ ತಿಳಿದುಬರುವ ಸಂಗತಿಯೇನೆಂದರೆ—ಆಗಿನಕಾಲದ ಜನರು ಅಗ್ರಹಾರಗಳು ಬೆಳೆಯಲೆಂಬ ಉದ್ದೇಶವನ್ನಿಟ್ಟುಕೊಂಡು ದಾನಾದಿಗಳನ್ನು ಕೊಟ್ಟು ಹೇಗೆ ಬಾಳುತ್ತಿದ್ದರೆಂಬುದನ್ನು ಇವು ನಿದರ್ಶಿಸುತ್ತವೆ. ಈ ದಾನದತ್ತಿಗಳು ಶೈಕ್ಷಣಿಕ ಸಂಸ್ಥೆಗಳಿಗೆ ಕೊಡಲ್ಪಟ್ಟಿದ್ದು ಅದು ಬಹಳ ಮಹತ್ವದ ಪುಣ್ಯಫಲವನ್ನುಂಟುಮಾಡುವಂತಹುದೆಂದು ತಿಳಿಯುತ್ತಿದ್ದರು.

(ಮುಂದುವರಿಯುವುದು)

---

6 ಇದೇ. IV YD. 59 P 62.

7 ಸೊ. ಅಂಡ್. ಸೊ. ಲೈಫ್. ಇನ್. ದಿ. ವಿಜಯನಗರ. ಎ. II. P. 20

8 ಎ. ಕರ್ನಾಟಿಕಾ VIII SB. 447. P. 204 "...... ತಾಯಿ ಚೆಂಗಮ್ಮನಿಗೆ ಪುಣ್ಯವಾಗಬೇಕೆಂದು........"

9 ಇದೇಗ್ರಂಥ XII KG 12. ಪುಟ 34.

# ರೈತನ ನೆಮ್ಮದಿ — ನಾಡಿಗೆ ಸಂಮೃದ್ಧಿ

ಕಡೆಗಣಿಸಲ್ಪಟ್ಟಿದ್ದ ರೈತ ಸಮುದಾಯದ ಏಳಿಗೆಯ ಕಡೆಗೆ ಕರ್ನಾಟಕದ ಹೊಸ ಸರ್ಕಾರವು ತನ್ನ ಮೊದಲ 12 ತಿಂಗಳಲ್ಲಿ ಹೆಚ್ಚಿನ ಗಮನ ಹರಿಸಿದೆ. ಈ ವಿಶೇಷ ಗಮನ ಆಲೋಚನೆಗೆ ಆಹಾರವಾಯಿತು. ಹರ್ಷಚಿತ್ತ ರೈತನೆಂದರೆ ಅಧಿಕ ಸಮೃದ್ಧಿ ಬೆಳೆ. ಅದರಿಂದ ಹೆಚ್ಚು ಜನಕ್ಕೆ ಹೆಚ್ಚು ಆಹಾರ.

ತನ್ನ ಪ್ರಥಮ ವಾರ್ಷಿಕ ದಿನವಾದ ಇಂದು ಸರ್ಕಾರ ತಾನು ನೀಡಿದ ಭರವಸೆ ಹೇಳಿಕೆಗಳನ್ನೂ, ಕಾರ್ಯಗತಗೊಳಿಸಿರುವ ಸಾಧನೆಗಳನ್ನೂ ಮತ್ತು ಈ ದಿಶೆಯಲ್ಲಿ ನಡೆಸಿದ ಸತತ ಪ್ರಯತ್ನವನ್ನೂ ಮೆಲಕು ಹಾಕುತ್ತಿದೆ.

## ಬೇಸಾಯದ ಬದುಕಿಗೆ ಭದ್ರ ನೆಲೆ

ಕಳೆದ 12 ತಿಂಗಳಲ್ಲಿ ರಾಜ್ಯದ ರೈತರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವಂತಹ ಹಲವಾರು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಮುಖ್ಯವಾದುವು ಈ ಕೆಳಕಂಡಂತಿವೆ.

ಹತ್ತು ಎಕರೆಗಳ ವರೆಗೆ ಭೂಕಂದಾಯ ಕೊಡಬೇಕಾಗಿಲ್ಲ.
ಕೃಷಿ ಉತ್ಪನ್ನಗಳ ಬೆಂಬಲ ಬೆಲೆಯಲ್ಲಿ ಏರಿಕೆ.
ನೀರಾವರಿಗೆ ಬಳಸುವ ವಿದ್ಯುಚ್ಛಕ್ತಿ ದರದಲ್ಲಿ ಇಳಿತಾಯ.
5 ಅಶ್ವಶಕ್ತಿ ವರೆಗೆ ಪ್ರತಿ ಅಶ್ವಶಕ್ತಿಗೆ ರೈತರು ಕೊಡಬೇಕಾದ ದರ ಕೇವಲ 50 ರೂಗಳು.
5 ಅಶ್ವ ಶಕ್ತಿಯ ಮೇಲಿನ ಪಂಪುಸೆಟ್ಟುಗಳಿಗೆ ಕೊಡಬೇಕಾದ ದರವನ್ನು ಪ್ರತಿ ಯೂನಿಟ್ಟಿಗೆ 22 ಪೈಸೆಯಿಂದ 17 ಪೈಸೆಗೆ ಇಳಿಸಿದೆ.
ಎಲ್ಲ ಖುಷ್ಕಿ ಬೆಳೆಗಳ ಮೇಲಿನ ಕೃಷಿ ಆದಾಯ ತೆರಿಗೆಯ ರದ್ದು.
ನೀರಾವರಿ ಭೂಮಿಯ ಮೇಲಿನ ಅಭಿವೃದ್ಧಿ ತೆರಿಗೆಯ ರದ್ದು.
ಸಣ್ಣ ಮತ್ತು ಅತಿ ಸಣ್ಣ ರೈತರ ತಕಾವಿ ಸಾಲಗಳ ಮನ್ನಾ.
ಗೊಬ್ಬರಗಳ ಮೇಲಿನ ಮಾರಾಟ ತೆರಿಗೆಯಲ್ಲಿ ಶೇಕಡ 5 ರಿಂದ 2 ಕ್ಕೆ ಇಳಿತ.
ಕಬ್ಬಿನ ಮೇಲಿನ ಸರ್‌ಚಾರ್ಜ್ ಮನ್ನಾ ಹಾಗೂ ಕಬ್ಬಿನ ಕೊಳ್ಳುವ ತೆರಿಗೆಯಲ್ಲಿ

ಪ್ರತಿ ಟನ್ನಿಗೆ 2.50 ರೂ. ಲಾಭ ದೊರೆಯುವಂತೆ ಮಾರ್ಪಾಡು.

1970 ರ ಬರಗಾಲದಲ್ಲಿ ಸಣ್ಣ ಮತ್ತು ಅತಿಸಣ್ಣ ರೈತರಿಗೆ ನೀಡಿದ್ದ ಮೂಲ ಧನ ಸಾಲದ ಮನ್ನಾ.

ಕೃಷಿ ಕಾರ್ಮಿಕರಿಗೆ ಸಾಮೂಹಿಕ ವಿಮಾ ಯೋಜನೆ ರೂಪದಲ್ಲಿ ಸಾಮಾಜಿಕ ಭದ್ರತಾ ಕ್ರಮಗಳ ಜೊತೆಗೆ ಕೃಷಿ ಕಾರ್ಮಿಕನು ಪ್ರಾಕೃತಿಕ ಅಪಘಾತ ಕ್ಕೀಡಾಗಿಸತ್ತಾಗ 5,000 ರೂ. ಗಳಷ್ಟು ಆಪತ್‌ಧನವನ್ನು ನೀಡಲು ಸರ್ಕಾರ ತೀರ್ಮಾನಿಸಿದೆ.

ಸಣ್ಣ ಮತ್ತು ಅತಿಸಣ್ಣ ರೈತರಿಗಾಗಿ ಭವಿಷ್ಯನಿಧಿ ಯೋಜನೆಯನ್ನು ಆರಂಭಿಸಲು ನಿರ್ಧಾರ.

ಭೂಸುಧಾರಣಾ ಕಾಯಿದೆಯನ್ವಯ ಜಮೀನು ಪಡೆದ ರೈತರಿಂದ ಜಮೀನು ಹಕ್ಕು ಪಡೆಯಲು ನೀಡಬೇಕಾದ ಪ್ರಥಮ ಕಂತಿನ ಹಣವನ್ನು ಒತ್ತಾಯಿಸದೇ ಪಟ್ಟಾ ನೀಡಲು ನಿರ್ಧಾರ.

ರಾಜ್ಯದ ಎಲ್ಲ ರೈತರಿಗೂ ಅನುಕೂಲವಾಗುವಂತೆ ಬೆಳೆ ವಿಮಾ ಯೋಜನೆ ಸೌಲಭ್ಯವನ್ನು ವಿಸ್ತರಿಸಲು ಸರ್ಕಾರ ನಿರ್ಧರಿಸಿದೆ.

ಬಿಡುವಿನ ಹಂಗಾಮಿನಲ್ಲಿ ರೈತರಿಗೆ ಅಭಿವೃದ್ಧಿ ಕಾರ್ಯಗಳಲ್ಲಿ 100 ದಿನಗಳ ಉದ್ಯೋಗ ನೀಡಿದೆ. ಈಗ 99 ತಾಲ್ಲೂಕುಗಳು ಈ ಯೋಜನೆಗೊಳಪಟ್ಟಿದೆ. ಈ ಯೋಜನೆಯ ಪ್ರಕಾರ ಕೆಲಸಗಾರರ ದಿನಗೂಲಿಯನ್ನು ರೂ. 4 ರಿಂದ 5 ಕ್ಕೆ ಏರಿಸಲಾಗಿದೆ.

## ರೇಷ್ಮೆ ಮಾರುಕಟ್ಟೆ

ಸರ್ಕಾರವು ರೇಷ್ಮೆ ದಾರ ಉತ್ಪಾದಕರು ಮತ್ತು ರೇಷ್ಮೆ ವರ್ತಕರ ನಡುವೆ ರೇಷ್ಮೆ ವಿನಿಮಯದ ವ್ಯವಸ್ಥೆಯನ್ನು ಮಾಡಿದೆ. ಇದರಿಂದ ಉತ್ಪಾದಕರಿಗೆ ಬಹಿರಂಗ ಹರಾಜಿನಲ್ಲಿ ನಿಗದಿಯಾದ ಬೆಲೆ ದೊರೆಯುವುದರ ಜೊತೆಗೆ ರೇಷ್ಮೆಯ ನಿಖರವಾದ ಪರೀಕ್ಷೆ, ವಿಂಗಡಣೆ, ತೂಕ ಸಿಗುವಂತಾಗಿದೆ.

ಈ ವರ್ಷ ರೇಷ್ಮೆ ಅಭಿವೃದ್ಧಿಗಾಗಿ ವಿಶ್ವಬ್ಯಾಂಕಿನಿಂದ 83 ಕೋಟಿ ರೂ. ಗಳ ನೆರವು ದೊರಕಿದೆ.

**ಕೈಗಾರಿಕೆಗಳಲ್ಲಿ ಹಿಂದುಳಿದ ಪ್ರದೇಶಗಳಿಗೆ ನವಚೇತನ:**

ರಾಜ್ಯದ ಹಿಂದುಳಿದ ಪ್ರದೇಶಗಳನ್ನು ಅಭಿವೃದ್ಧಿ ಪಡಿಸಲು ಬೇಕಾದ

ಸಮೀಕ್ಷೆ ನಡೆಸಿ, ಯೋಜನೆ ತಯಾರಿಸಲು ಸರ್ಕಾರವು ಒಂದು ಸಮಿತಿಯನ್ನು ನೇಮಿಸಿದೆ. ಈ ಸಮಿತಿಯು 50 ತಾಲ್ಲೂಕುಗಳನ್ನು ಕೈಗಾರಿಕೆಯಲ್ಲಿ ಹಿಂದುಳಿದ ತಾಲ್ಲೂಕುಗಳೆಂದು ಪರಿಗಣಿಸಿದೆ. ಈ ಪ್ರದೇಶದಲ್ಲಿ ಕೈಗಾರಿಕೆಗಳನ್ನು ಕೈಗೊಳ್ಳಲು ಮುಂದೆ ಬರುವ ಉದ್ಯಮಿಗಳಿಗೆ ಹಲವಾರು ಉತ್ತೇಜನ ಮತ್ತು ರಿಯಾಯಿತಿಗಳನ್ನು ನೀಡಲಾಗಿದೆ. ಕಿರ ಸಣ್ಣಪುಟ್ಟ ಕೈಗಾರಿಕೆಗಳಿಗಾಗಿ ವಸಾಹತು ನಿರ್ಮಿಸಲು ಡಚ್ ಸರಕಾರದಿಂದ 18 ಕೋಟಿ ರೂ. ಗಳ ನೆರವನ್ನು ಪಡೆಯಲಾಗಿದೆ.

**ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ:**

ಹೈದರಾಬಾದ್ ಕರ್ನಾಟಕ ಪ್ರದೇಶದ ಸಮಸ್ಯೆಗಳನ್ನು ಪರಿಶೀಲಿಸಿ ಅಭಿವೃದ್ಧಿಗೆ ಸಲಹೆ ನೀಡಲು ಸರ್ಕಾರ ಉನ್ನತ ಮಟ್ಟದ ಸಮಿತಿಯೊಂದನ್ನು ನೇಮಿಸಿದೆ. ಈ ಪ್ರದೇಶದ ಪ್ರಮುಖ ಯೋಜನೆಗಳಲ್ಲೊಂದಾದ 20 ಲಕ್ಷ ಎಕರೆಗಳಿಗೆ ನೀರಾವರಿ ಒದಗಿಸುವ ಕೃಷ್ಣಾ ಮೇಲ್ದಂಡೆ ಯೋಜನೆಯು ಕಾರ್ಯ ಭರದಿಂದ ಸಾಗುತ್ತಿದೆ.

**ಕಾವೇರಿ ನೀರು ಹಂಚಿಕೆ:**

**ಕರ್ನಾಟಕ ಸರ್ಕಾರದ ಹತ್ತು ಅಂಶಗಳ ಯೋಜನೆ:**

ಕಾವೇರಿ ನೀರನ್ನು ಸಂಬಂಧಪಟ್ಟ ರಾಜ್ಯಗಳು ಸಮನಾಗಿ ಮತ್ತು ಉಪಯುಕ್ತವಾಗಿ ಬಳಸಿಕೊಳ್ಳಲು ಸಾಧ್ಯವಾಗುವಂತೆ ಇತ್ತೀಚೆಗೆ ಕರ್ನಾಟಕ ಸರ್ಕಾರವು 10 ಅಂಶಗಳ ಸೂತ್ರವನ್ನು ತಯಾರಿಸಿದೆ. ಈ ಸೂತ್ರ ಒಪ್ಪಿಗೆಯಾದಲ್ಲಿ ಈ ವಿಷಯವನ್ನು ಪರಸ್ಪರ ಅರಿವು ಮತ್ತು ಸಹಕಾರದಿಂದ ಪರಿಹರಿಸಿಕೊಳ್ಳಲು ಸಾಧ್ಯವಾಗಿ ಅನೇಕ ವರ್ಷಗಳ ವಿವಾದ ಇತ್ಯರ್ಥವಾಗುತ್ತದೆ.

**ನೀರಾವರಿ: ವರಾಹಿ ಮತ್ತಿತರ ಯೋಜನೆಗಳು.**

ಕುಂದಾಪುರದ 19.8 ಕೋಟಿ ರೂ. ಗಳ ವೆಚ್ಚದ ವರಾಹಿ ನೀರಾವರಿ ಯೋಜನೆಯು ಭಾರತದಲ್ಲಿ ಪಶ್ಚಿಮಕ್ಕೆ ಹರಿಯುವ ನದಿಗಳಲ್ಲೇ ಅತ್ಯಂತ ದೊಡ್ಡದಾದ ಪ್ರಥಮ ಯೋಜನೆ. 1982 ರ ಹೊತ್ತಿಗೆ ಪೂರ್ಣಗೊಳಿಸಲು ಉದ್ದೇಶಿಸಿರುವ ಈ ಯೋಜನೆಯಿಂದ ಈ ಪ್ರದೇಶದ ಆರ್ಥಿಕ ಸಾಮಾಜಿಕ ಪ್ರಗತಿಗೆ ಹೆಚ್ಚಿಗೆ ನೆರವು ದೊರೆಯಲಿದೆ.

ಇತ್ತೀಚೆಗೆ ಕಾರ್ಯಾರಂಭವಾದ ಹಾರಂಗಿ ಮತ್ತು ಹೇಮಾವತಿ ಯೋಜ

...ಳು ರಾಜ್ಯದ ರೈತರಿಗೆ ನೀರಾವರಿ ಸೌಲಭ್ಯ ವಿಸ್ತರಿಸಲು ಸರ್ಕಾರ ಕೈಗೊಂಡ ಪ್ರಯತ್ನವನ್ನು ಸಫಲಗೊಳಿಸಿವೆ.

ನೀರಾವರಿ ವಿಸ್ತರಣೆಯ ವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸಿರುವ ಸರ್ಕಾರ 1980-81 ರಲ್ಲಿ 20,000 ನೀರಾವರಿ ಬಾವಿಗಳನ್ನು ತೋಡಲು ಹಾಗೂ 20,000 ಪಂಪುಸೆಟ್ಟುಗಳಿಗೆ ವಿದ್ಯುತ್ ಒದಗಿಸಲು ಯೋಚಿಸಿದೆ.

**ಅಧಿಕ ವಿದ್ಯುತ್ ಉತ್ಪಾದನೆ:**

135 ಮೆಗವಾಟ್ ಅಧಿಕ ವಿದ್ಯುತ್ ಉತ್ಪಾದಿಸುವ ಕಾಳೀನದಿ ದ್ವಿತೀಯ ಜಲವಿದ್ಯುತ್ ಘಟಕವು 1980 ರಲ್ಲಿ ಆರಂಭಗೊಂಡಿದೆ. ರಾಯಚೂರಿನ ಥರ್ಮಲ್ ಘಟಕದ ಕೆಲಸ ಮುಂದುವರಿಯುತ್ತಿದೆ. ಈ ಯೋಜನೆಯು 210 ಮೆಗಾವಾಟ್ ಸಾಮರ್ಥ್ಯದ ಮೊದಲ ಘಟಕವು 1983 ರಲ್ಲಿ ಅಷ್ಟೇ ಸಾಮರ್ಥ್ಯದ ಎರಡನೆ ಘಟಕವು 1984 ರಲ್ಲೂ ಕಾರ್ಯಾರಂಭ ಮಾಡಲಿವೆ.

**ಸಾಂಸ್ಕೃತಿಕ ಕ್ಷೇತ್ರ:**

ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಜೀವಂತವಾಗಿ ಉಳಿಸಿ ಬೆಳೆಸುವ ಸಲುವಾಗಿ ಸರ್ಕಾರವು ಜಾನಪದ ಕಲೆ ಸಾಹಿತ್ಯಗಳ ಬೆಳವಣಿಗೆಗೆ ಸಾಕಷ್ಟು ಹಣ ಖರ್ಚು ಮಾಡುತ್ತಿದೆ. ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿರುವ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ನಮ್ಮ ಜಾನಪದಕಲೆ ಮತ್ತು ಕಲಾವಿದರ ಅಭಿವೃದ್ಧಿಯ ಕಡೆ ಗಮನ ನೀಡಲಿವೆ. ರಾಜ್ಯದ 33 ಜನ ಖ್ಯಾತ ಸಾಹಿತಿ ಕಲಾವಿದರಿಗೆ ಅವರ ಜೀವನ ಪರ್ಯಂತ 500 ರೂ. ಗಳ ಮಾಸಿಕ ವೇತನ ನೀಡಲಾಗಿದೆ.

**ಸಾಧನೆ ಮತ್ತು ಯೋಜನೆ:**

ಮಂಗಳೂರು ಮತ್ತು ಗುಲ್ಬರ್ಗಗಳಲ್ಲಿ ಎರಡು ವಿಶ್ವ ವಿದ್ಯಾನಿಲಯಗಳ ಸ್ಥಾಪನೆ. 140 ಪ್ರೌಢಶಾಲೆಗಳು, 29 ಜ್ಯೂನಿಯರ್ ಕಾಲೇಜುಗಳು, 51 ಪ್ರಥಮ ದರ್ಜೆ ಕಾಲೇಜುಗಳು, 11 ಶಿಕ್ಷಣ ಕಾಲೇಜುಗಳು, 9 ಪಾಲಿಟೆಕ್ನಿಕ್ ಗಳು, 12 ಇಂಜಿನಿಯರಿಂಗ್ ಕಾಲೇಜುಗಳು, 4 ಫಾರ್ಮಸಿ ಮತ್ತು ಔಷಧಿ ಕಾಲೇಜುಗಳು ಮತ್ತು ಒಂದು ಕಾನೂನು ಕಾಲೇಜಿನ ಆಂಭಕ್ಕೆ ಮಂಜೂರಾತಿ. ಸುಮಾರು 16 ಲಕ್ಷ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ಮತ್ತು ಮಧ್ಯಾಹ್ನದ ಉಪಹಾರದ ವ್ಯವಸ್ಥೆ ಹರಿಜನ ಸರ್ವಾಂಗೀಣ ಅಭಿವೃದ್ಧಿಗಾಗಿ 1980-81 ನೇ

ಸಾಲಿಗಾಗಿ 64 ಕೋಟಿ ರೂ. ಗಳ ಸಂಘಟಿತ ಯೋಜನೆಯನ್ನು ಸಿದ್ಧಗೊಳಿಸ
ಗಿದೆ. ಗಿರಿಜನರಿಗಾಗಿಯೇ 3.8 ಕೋಟಿ ರೂ. ಗಳ ಉಪಯೋಜನೆಯೂ ಸಿ
ವಾಗಿದೆ.

ಶಾಲಾನಂತರ ಮಕ್ಕಳು ಓದಲು ಅನುಕೂಲವಾಗುವಂತೆ ದೀಪ ಮತ್ತು ಪೀಠೋಪಕರಣಗಳನ್ನು ಒಳಗೊಂಡ ಭಜನೆ ಮಂದಿರಗಳ ಸ್ಥಾಪನೆ, ಗ್ರಾಮಾಂತರ ಸಂಪರ್ಕ ವ್ಯವಸ್ಥೆಗಾಗಿ, 18.7 ಕೋಟಿ ರೂ. ಗಳ ಅವಕಾಶ.

36 ಅನಗತ್ಯ ಮಂಡಳಿ ಮತ್ತು ಸಮಿತಿಗಳ ರದ್ದು.

ಸಾಂದ್ರ ಗ್ರಾಮಾಭಿವೃದ್ಧಿ ಯೋಜನೆಯಡಿಯಲ್ಲಿ 175 ತಾಲ್ಲೂಕುಗಳ ಅಭಿವೃದ್ಧಿ.

ನಿವೃತ್ತ ಸರ್ಕಾರಿ ಅಧಿಕಾರಿ ನೌಕರರ ಸೇವಾವಧಿ ವಿಸ್ತರಣೆ ಮತ್ತು ಮರುನೇಮಕದ ರದ್ದು.

ಬಡವರಿಗೆ ಒಂದು ಲಕ್ಷ ಜನತಾ ಗೃಹಗಳು.

ರಾಜ್ಯೋತ್ಸವಕ್ಕೆ ಮುಂಚೆ 2.5 ಲಕ್ಷಕ್ಕೂ ಹೆಚ್ಚು ಕಡತಗಳು ವಿಲೇವಾ
ವರ್ಗಾವರ್ಗೀ ಹಾಗೂ ಮುಂಬಡ್ತಿಗಳ ವಿಚಾರದಲ್ಲಿ ಒತ್ತಾಯ ತರುವವ
ವಿರುದ್ಧ ಕಟ್ಟುನಿಟ್ಟಿನ ಕ್ರಮ.

1981 ರ ನವೆಂಬರ್ ಒಂದರ ವೇಳೆಗೆ ರಾಜ್ಯದ ಪ್ರತಿಹಳ್ಳಿಗೂ ಕುಡಿಯು
ನೀರು ಮತ್ತು ಪ್ರಾಥಮಿಕ ಶಾಲಾ ಸೌಲಭ್ಯ ಕಲ್ಪಿಸಲು ಯೋಜನೆಯ
ಪೂರ್ಣಗೊಂಡಿದೆ.

1981 ರ ನವೆಂಬರ್ ಒಂದರ ವೇಳೆಗೆ ಎಲ್ಲ ಭೂವಿವಾದ ಪ್ರಕರಣಗ
ವಿಲೇವಾರಿಗೆ ನಿರ್ಧಾರ.

1980 ರಲ್ಲಿ 1,000 ಕ್ಕೂ ಹೆಚ್ಚು ಹಳ್ಳಿಗಳಿಗೆ ವಿದ್ಯುತ್ ಸೌಲಭ್ಯ.

ಹಿಂದುಳಿದ ಕುಶಲಕರ್ಮಿಗಳ ಕುಟುಂಬದ ಯುವಕರಿಗಾಗಿ ಒಂದು ಸಮಗ್ರ ಯೋಜನೆ ಸಿದ್ಧ.

ಹೊಸ ಆರನೆಯ ಪಂಚವಾರ್ಷಿಕ ಯೋಜನೆಗಾಗಿ 2,400 ಕೋಟಿ ರೂ. ಗಳ ಹೂಡಿಕೆಗೆ ಅಂತಿಮ ಸ್ವರೂಪ ನೀಡಲಾಗಿದೆ.

ಜನತೆಯ ಅಗತ್ಯಗಳನ್ನು ಪೂರೈಸಲು ಕಂಕಣ ಬದ್ಧವಾದ ಯುವ ಸರ್ಕಾರ ಕರ್ನಾಟಕ ಸರ್ಕಾರ.

**ಕರ್ನಾಟಕ ವಾರ್ತಾ ಮತ್ತು ಪ್ರಚಾರ ಇಲಾಖೆ.**

# "ವಿಜಯನಗರ ಸ್ಥಾಪನೆಯಲ್ಲಿ ಲಿಂಗಧರ್ಮದ ಪಾತ್ರ"

**—ವೇದ ವೇದಾಂತ ವಿದ್ಯಾವಾಚಸ್ಪತಿ ಡಿ॥ ಶ್ರೀ ಟಿ. ಎಸ್. ಮಲ್ಲಪ್ಪ**

ರೆಪಟರಾಳ ಕೃಷ್ಣರಾಯರು ಅವರ "ಕರ್ನಾಟಕ ಲಾಕುಳ ಶೈವರ ಇತಿಹಾಸ" ಗ್ರಂಥದಲ್ಲಿ ಬ್ರಾಹ್ಮಣರಲ್ಲೂ ಮಾಹೇಶ್ವರರೆಂದೆನಿಸಿಕೊಳ್ಳುವ ಶುದ್ಧ ಶ್ರೌತೀಯ ಶೈವರೂ ಇದ್ದರು ಎಂದು ಹೇಳಿದ್ದಾರೆ; ಅಲ್ಲದೆ 'ಮಹೀಸುರ' ಎಂದೂ 'ವೀರಶೈವಾಚಾರ್ಯ ಚಕ್ರವರ್ತಿಃ' ಎಂದೂ ಉಕ್ತನಾದ ಗೋಲಕೀ ಮಠದ ವಿಶ್ವೇಶ್ವರ ಶಿವಾಚಾರ್ಯರ ವಿಷಯವನ್ನು ಹೇಳುವ ಮಲ್ಕಾಪುರ ಶಾಸನ ವಿಷಯವನ್ನು ಹೇಳುವಾಗ, ಅವರು ಶುದ್ಧ ಶೈವ ಸಂಪ್ರದಾಯದ ಬ್ರಾಹ್ಮಣ ವೀರಶೈವ ಸಂಸ್ಥೆ ಇದ್ದುದು ಈ ಶಾಸನದಿಂದ ವ್ಯಕ್ತವಾಗುತ್ತದೆ. ಈಗಲೂ ಆಂಧ್ರದಲ್ಲಿ ಈ ಸಂಪ್ರದಾಯದ ಬ್ರಾಹ್ಮಣರಿರುವರು ಎಂದು ಈ ಗ್ರಂಥದಲ್ಲಿ ಹೇಳಿದ್ದಾರೆ. ಆಂಧ್ರದೇಶದಲ್ಲಿರುವ ಲಿಂಗಯಜ್ಞೋಪವೀತ ಧಾರಿ ಬ್ರಾಹ್ಮಣರನ್ನು ಕುರಿತು ಹೇಳಿದ ಮಾತಿದು. ಆಂಧ್ರ ದೇಶದ ಪ್ರಸಿದ್ಧ ವಿದ್ವಾಂಸರಾದ ವೇಟೂರಿ ಪ್ರಭಾಕರ ಶಾಸ್ತ್ರಿಗಳು ಹೇಳುವಂತೆ ಗೋಳಕೀಮಠದ ಸಂಪ್ರದಾಯವು ಆರಾಧ್ಯ ಬ್ರಾಹ್ಮಣರದು. ಈ ಸಂಪ್ರದಾಯದ ಸೋಮ ಶಂಭು ಪದ್ಧತಿಯನ್ನು ಬರೆದ ಸೋಮ ಶಂಭುವಿನ ಗುರು ಸದ್ಭಾವ ಶಂಭುವು ಕ್ರಿ. ಶ. ೧೦ ನೆಯ ಶತಮಾನದಲ್ಲಿ ಈ ಮಠವನ್ನು ಸ್ಥಾಪಿಸಿದನು. ಈ ಪೀಠದವರು ದಕ್ಷಿಣ ದೇಶದಲ್ಲೆಲ್ಲಾ ಹರಡಿ ಅದ್ವೈತ ಮಠಗಳಾದ ವಿರೂಪಾಕ್ಷಮಠ, ಪುಷ್ಪಗಿರಿ ಮಠವೇ ಮೊದಲಾದವನ್ನು ಸ್ಥಾಪಿಸಿದರು. ಈ ಶಾಸನದಲ್ಲಿಯೇ ಹೇಳಿದಂತೆ ಈ ಸಂಪ್ರದಾಯದಲ್ಲಿ ಪ್ರಸಿದ್ಧನಾದ ವಿಶ್ವೇಶ್ವರ ಶಿವಾಚಾರ್ಯನು ಚೋಳಮಾಳವಾದಿ ಅನೇಕ ರಾಜರ ಗುರುವೂ ವೀರಶೈವ ಕಾಕತಿಗಣಪತಿ ಚಕ್ರವರ್ತಿಯ ಹಾಗೂ ಕಳಚೂರ್ಯ ಚಕ್ರವರ್ತಿಯ ದೀಕ್ಷಾ ಗುರುವೂ ಆಗಿದ್ದನು. ಬಸವೇಶ್ವರನು ಹುಟ್ಟಿದ ಬ್ರಾಹ್ಮಣ ಶುದ್ಧ ಶೈವರ ಈ ಸಂಪ್ರದಾಯವು ಕ್ರಿ.ಶ. ಹತ್ತನೆಯ ಶತಮಾನದಿಂದ ಆರಂಭವಾದುದು. ಆದರೆ ದಶಾಶ್ವಮೇಧಗಳನ್ನು ಮಾಡಿದನೆಂದು ಹೇಳಿಕೊಳ್ಳುವ ಕ್ರಿ. ಶ. ಎರಡನೆಯ ಶತಮಾನದ ಭಾರಶೈವರ ಶಾಸನದಲ್ಲಿ ಅವರು 'ಶಿವಲಿಂಗೋದ್ವಹನ ಶಿವಪರಿತುಷ್ಟ ಸಮುತ್ಪಾದಿತ ವಂಶದವರೆಂದು ಹೇಳಿಕೊಂಡಿರುವ ಕಾಲದಿಂದ, ಇವರಂತೆ ಶಿವಲಿಂಗಗಳನ್ನು ಧರಿಸುತ್ತಿದ್ದ ಚೋಳಪಲ್ಲವರಾಜರ ಕಾಲದಲ್ಲಿ ಮುಂದುವರೆದು, ಬಸವೇಶನ ಕಾಲದವರೆಗೂ ಮುಂದುವರೆಯಿತು, ಈ ಶುದ್ಧ ವೈದಿಕ ಶೈವಾರಾಧ್ಯ ಬ್ರಾಹ್ಮಣರ ಲಿಂಗಯಜ್ಞೋಪವೀತವನ್ನು ಧರಿಸುವ ಪದ್ಧತಿಯು ಇತ್ತು ಎಂದು ಹೇಳಿ ಬಸವೇಶ್ವರನು

ಹುಟ್ಟಿದ ಕುಲಜಾತಿ ಸಂಪ್ರದಾಯುಗಳ ಪೂರ್ವ ಚರಿತ್ರೆಯ ವಿಮರ್ಶೆಯನ್ನು ಮುಗಿಸಬಹುದು.

ಇಷ್ಟು ಪ್ರಾಚೀನ ಸಂಪ್ರದಾಯುವನ್ನು ಪರಿಪೋಷಿಸುವುದರಿಂದ ಲಾಭವಿಲ್ಲ ವೆಂದು ಕರ್ನಾಟಕ ದೇಶದಲ್ಲಿ ಬಸವೇಶ್ವರ ಏಕಾಂತರಾಮಯ್ಯ ಮೊದಲಾದವರು ವರ್ಣಾಶ್ರಮಾಚಾರವುಳ್ಳ ಪ್ರಾಚೀನ ಶೈವಮತ ಭೇದಗಳನ್ನೆಲ್ಲ ತೆಗೆದು ಹಾಕಿ ಅದ ರಲ್ಲಿನ ವೀರಶೈವ ಎಂಬ ಹೊಸಮತವನ್ನು ಸರ್ವ ಶೈವ ಮತಾನುಸಾರವಾಗಿ ಸ್ಥಾಪಿ ಸಿದರು. ಎಂದು ವೇಟೂರಿ ಪ್ರಭಾಕರ ಶಾಸ್ತ್ರಿಗಳು ಅವರ ತೆಲುಗು ಬಸವಪುರಾಣದ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದರೆ ಈ ಪ್ರಾಚೀನ ಧರ್ಮದ ಪಂಡಿತಾರಾಧ್ಯ ಮೊದಲಾದವರು ಬಸವೇಶ್ವರನನ್ನು ಮೆಚ್ಚಿಕೊಂಡವರಾದರು ಬ್ರಾಹ್ಮಣ್ಯವನ್ನು ತ್ಯಜಿ ಸಲು ಒಪ್ಪಲಿಲ್ಲ. ಹರಿಹರ, ರಾಘವಾಂಕ, ಪದ್ಮರಸಾದಿಗಳೂ ಲಿಂಗಯಜ್ಞೋಪವೀತ ಧಾರಿಗಳಾಗಿಯೇ ಇದ್ದುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಶುದ್ಧ ಶೈವ ಬ್ರಾಹ್ಮಣರೆಂದು ಅಂದೂ ಇತ್ತೀಚೆಗೆ ಆರಾಧ್ಯ ಬ್ರಾಹ್ಮಣರೆಂದು ಕರೆದುಕೊಳ್ಳುತ್ತಿರುವವರ ವಿಷಯದಲ್ಲಿ ವೇಟೂರಿ ಪ್ರಭಾಕರ ಶಾಸ್ತ್ರಿಗಳು ಅದೇ ಆಧಾರದಲ್ಲಿ ಹೀಗೆ ಹೇಳಿರುವರು ಲಿಂಗಧಾರಣ, ಕರ ಪೀಠಾರ್ಚನ, ಷಟಸ್ಥಲ ವಿವೇಕ ಮೊದಲಾದ ಸಂಪ್ರ ದಾಯಗಳು ಇವರಲ್ಲಿಯೂ ಇರುವುದರಿಂದ ಇವರು ವೀರಶೈವರೇನೋ ಎನಿಸುವುದು, ಆದರೆ ವೀರಶೈವರಿಗೆ ಮುಖ್ಯವಾದ ವೈದಿಕಕರ್ಮತ್ಯಾಗ, ಕುಲಾಶ್ರಮಾಚಾರ, ಅನ್ಯ ದೇವತಾರಾಧನ ತ್ಯಾಗ ಮೊದಲಾದ ವೀರವ್ರತಗಳು ಇವರಲ್ಲಿಲ್ಲವಾಗಿ ಆ ಸಂಶಯಕ್ಕೆ ಪ್ರಬಲ ಬಾಧಕ ವಿದೆ. ಹೀಗೆ ಶುದ್ಧ ಶೈವ ಆರಾಧ್ಯ ಬ್ರಾಹ್ಮಣರಲ್ಲಿ ಅಬ್ರಾಹ್ಮಣ್ಯ ವಾದುದೇನೂ ಇಲ್ಲ.

ಚಾಲುಕ್ಯ ರಾಜ್ಯಾಪಹರಣವನ್ನು ಮಾಡಿದ ಬಿಜ್ಜಳನ ಕೊಲೆಯು ರಾಜಕೀಯ ವಿದ್ವೇಷದಿಂದಲಾದುದಾದರೂ ಧರ್ಮ ವಿದ್ವೇಷವಿದ್ದಂತೆ ಪರಿಣಮಿಸಿತು. ಆದರೂ ಮಾಹೇಶ್ವರ ಧರ್ಮಕ್ಕೆ ಅಷ್ಟೇನೂ ಚ್ಯುತಿಯಾಗಲಿಲ್ಲ. ಆ ಧರ್ಮಕ್ಕೆ ಅನೇಕ ರಾಜರ ಆಶ್ರಯವಿತ್ತು. [ A Twelth century. University In Mysore VII. Q. J. M. S 159 ] ಎಂಬ ಡಾ॥ ವೆಂಕಟಸುಬ್ಬಯ್ಯ ನವರ ಲೇಖನದಿಂದ ತಿಳಿದು ಬರುವಂತೆ ಈ ಧರ್ಮದ ಮಠಗಳು ರಾಜಕುಮಾರರು ರಾಜರಾಗಲು ತಕ್ಕ ವಿದ್ಯಾಭ್ಯಾಸ ಮಾಡುವ ವಿದ್ಯಾಕೇಂದ್ರಗಳಾಗಿದ್ದು ಚಾಳುಕ್ಯ ಕಲಚೂರಿ ಹೊಯ್ಸಳಾದಿ ರಾಜರುಗಳಿಂದ ದಾನಗಳನ್ನು ಪಡೆಯುತ್ತಿದ್ದವು. ಮೈಸೂರು ಗೆಜೆಟಿಯರಿನಲ್ಲಿ ಹೇಳುವಂತೆ ಹೊಯ್ಸಳ ರಾಜಧಾನಿಯಾದ ಹಳೇಬೀಡಿ ನಲ್ಲಿಯೇ ಈ ಮಹೇಶ್ವರರ ಮಠವಿದ್ದಿತು. ಚಾಳುಕ್ಯ ಕಳಚೂರ್ಯರನ್ನು ಸೋಲಿಸಿ ಸ್ವತಂತ್ರನಾದ ನರಸಿಂಹಬಲ್ಲಾಳ ದ್ವಿತೀಯನು ಪರಮಶಿವಭಕ್ತನಾದುದರಿಂದ ಇವನಿಗೆ "ಶಿವಬಲ್ಲಾಳ" ಎಂಬ ಹೆಸರಿದೆ. ರೇಣುಕಾಚಾರ್ಯರ ಶಿಷ್ಯರ ಶಿಷ್ಯನಾದ

ಸಿದ್ಧಗಂಗಾ

ಗುರು ಚಿತ್ರಾರಾಧ್ಯನು ಇವನಿಗೆ "ವೀರಶೈವ" ದೀಕ್ಷೆಯನ್ನು ಕೊಟ್ಟಂತೆ "ಸುಜ್ಞಾನ ಬೋಧೆ" ಎಂಬ ಗ್ರಂಥದ ೧೧ನೆಯ ಸಂಧಿಯಲ್ಲಿ ಹೇಳಿದೆ. ಇದರಲ್ಲಿ ಅಸಂಭವವಾದುದೇನೂ ಇಲ್ಲ. ಕಪಟರಾಳ ಕೃಷ್ಣರಾಯರ "ಕರ್ನಾಟಕಲಾಕುಳ ಶೈವರ ಇತಿಹಾಸ" ಗ್ರಂಥದ ೧೧೯ನೆಯ ಪುಟದಲ್ಲಿ ಗಮನಿಸಿರುವಂತೆ ಬಲ್ಲಾಳ ನರಸಿಂಹನು ದತ್ತಿಬಿಟ್ಟ ಶಾಸನದಲ್ಲಿ ದತ್ತಿಪಡೆದ ಗುರುವನ್ನು "ಅಭಿನವ ಪಾಶುಪತ ಸಮಯವಾರ್ಧಿವರ್ಧನ ಸುಧಾಕರರು" ಎಂದಿರುವುದರಲ್ಲಿ "ಅಭಿನವ" ಪದವು ಕ್ರಿ.ಶ. ೧೨೨೬ರಲ್ಲಿ ಉಪಯೋಗಿಸಿರುವುದು ಗಮನಾರ್ಹವಾಗಿದೆ. ಆಗ ಇನ್ನೂ ವೀರಶೈವ ಪದವು ರೂಢಿಯಲ್ಲಿರಲಿಲ್ಲ. ವೀರಶೈವ ಬ್ರಾಹ್ಮಣರಾದ ಹರಿಹರ ರಾಘವಾಂಕ ಪದ್ಮರಸರಿಗೆ ಈತನು ಆಶ್ರಯವನ್ನು ಕೊಟ್ಟಿದ್ದನು. ಕವಿಚರಿತ್ರೆಯಲ್ಲಿ ಹೇಳಿರುವಂತೆ ' ನರಸಿಂಹಬಲ್ಲಾಳನ ದಂಡನಾಯಕನಾದ ಕಮ್ಮೆಕುಲವಲ್ಲಭಗೌರಪನ....ಕಾಲಾನಂತರ ನರಸಿಂಹಬಲ್ಲಾಳನು ಪದ್ಮರಸನಿಗೆ ದಂಡೇಶಪದವಿಯನ್ನು ಕೊಟ್ಟು ಮಂತ್ರಿಯನ್ನು ಮಾಡಿಕೊಂಡನು. ಪದ್ಮರಸನು ಗುರು ಪರಂಪರೆಗೆ ಸೇರಿದವನು ಚತುಶ್ಶಾಸ್ತ್ರಪಂಡಿತನು, ಈತನು ಗೌರಪನ ಅಕ್ಕ ಮಂಗಳೆಯ ಮಗನು.

ಮತ್ತೆ ಮತ್ತೆ ಏರಿಬರುತ್ತಿದ್ದ ತುರಷ್ಕರ ಆಕ್ರಮಣವು ದೇವಗಿರಿಯ ಯಾದವರ ಸೋಲಿಗೆ ಕಾರಣವಾಯಿತು. ಕೆ. ಎ. ನೀಲಕಂಠಶಾಸ್ತ್ರಿಗಳ "Development of Religion in South India" ಗ್ರಂಥದ ೬೫ನೆಯ ಪುಟದಲ್ಲಿ ಹೇಳಿದಂತೆ, ವೀರಶೈವ ಎರಡು ಪಂಗಡವಾದ ಆರಾಧ್ಯ ಬ್ರಾಹ್ಮಣರು ಲಿಂಗಾಯಿತರು ತಮ್ಮಲ್ಲಿನ ಭಿನ್ನಾಭಿಪ್ರಾಯವನ್ನು ಲಕ್ಷಿಸದೆ ಒಂದಾಗಿ ತುರುಷ್ಕರ ಆಕ್ರಮಣವನ್ನು ತಡೆದು ವಿಜಯನಗರದ ವೈಭವಕ್ಕೆ ಕಾರಣರಾದರು. ವೀರಶೈವನಾದ ಕಾಕತೀಯ ಪ್ರತಾಪ ರುದ್ರನು ಅತಿಪರಾಕ್ರಮದಿಂದ ಮತ್ತೆ ಮತ್ತೆ ತುರುಷ್ಕ ಸೈನ್ಯಬಲವನ್ನು ಹೊಡೆದೋಡಿಸುತ್ತಿದ್ದುದು, ಒಂದು ಬಾರಿ ಸೋತುಹೋಗಿದ್ದ ಬಲ್ಲಾಳ ತೃತೀಯನು ತುರುಷ್ಕರನ್ನು ಎದುರಿಸಲು ಸನ್ನದ್ಧನಾಗಲು ಅವಕಾಶಕೊಟ್ಟಿತು. ಆದರೆ ದೇವಗಿರಿಯ ಹಿಂದೂರಾಜರ ಸಹಾಯದಿಂದ ಪ್ರತಾಪರುದ್ರನ ಸೋಲಾಯಿತು. ಗುರುವಂಶ ಕಾವ್ಯದಂತೆ ಹರಿಹರಬುಕ್ಕರು ಇವನ ಆಶ್ರಯದಲ್ಲಿದ್ದವರು ಸ್ವದೇಶವಾದ ಕನ್ನಡನಾಡಿನ ರಕ್ಷಣೆಗೆ ಧಾವಿಸಿದರು. ಅವರು ಅಪ್ರತಿಮ ಕನ್ನಡಿಗ ಶೂರರು. ಬಲ್ಲಾಳತೃತೀಯನು ತುರುಷ್ಕರನ್ನೆದಿರುಸುತ್ತಾ ವೀರಮರಣವನ್ನು ಹೊಂದಿದರೂ, ಹರಿಹರನೂ ಅವನ ಸಹೋದರರೂ ಅವನ ಮಾಂಡಲೀಕರಾಗಿ ಯುದ್ಧಮಾಡಿ ತುರುಷ್ಕರನ್ನು ಹೊಡೆದೋಡಿಸಿ ಹಿಂದೂಧರ್ಮೋದ್ಧಾರ ಮಾಡಿದರು. ಹೀಗೆ ತುರುಷ್ಕರನ್ನೋಡಿಸಿ ಧರ್ಮೋದ್ಧಾರ ಕಾರ್ಯವನ್ನು ಮಾಡುವುದರಲ್ಲಿ ಸಹಾಯ ಮಾಡಿದವರಲ್ಲಿ ಮೊದಲು ಹೆಸರಿಸಬೇಕಾದುದು ವಿದ್ಯಾರಣ್ಯರನ್ನು ಹಾಗೂ ರಾಜಕುಲಗುರುಗಳಾದ ಕ್ರಿಯಾಶಕ್ತಿ ದೇಶಿಕರನ್ನು, ಉಪನಿಷನ್ಮಾರ್ಗ ಪ್ರತಿಷ್ಠಾಪಕನಾದ ಆಂಗೀರಸ ಮಾಧವಮಂತ್ರಿ, ವೇದ

ಭಾಷ್ಯಕಾರ ಸಾಯಣಮಂತ್ರಿ, ಅವನ ಸಹೋದರ ಭಾರದ್ವಾಜ ಗೋತ್ರದ ಮಾಧವ ಮಂತ್ರಿ, ಇವರು ಧರ್ಮೋದ್ಧಾರದಲ್ಲಿ ಸಹಾಯಕರಾಗಿದ್ದಂತೆ ಯುದ್ಧದಲ್ಲಿಯೂ ಅಪ್ರತಿಮ ಶೂರರಾಗಿದ್ದರು. ಇವರೆಲ್ಲರಿಗೂ ಗುರುವಾಗಿದ್ದವರು ಲೌಕಿಕಕ್ಕೆ ವಿಮುಖರಾದ ವಿದ್ಯಾತೀರ್ಥಮಹೇಶ್ವರರು. ಸರ್ವಾಧಿಕಾರಿ ಬ್ರಹ್ಮಶ್ರೀ ಶ್ರೀಕಂಠಶಾಸ್ತ್ರಿಗಳು ಹೇಳುವಂತೆ "ಶೃಂಗಗಿರಿ ಮಠದಲ್ಲಿ ಲೌಕಿಕ ವ್ಯವಹಾರ ವ್ಯವಸ್ಥೆಗಳೆಲ್ಲವೂ ವಿದ್ಯಾರಣ್ಯಸ್ವಾಮಿಗಳವರ ಕಾಲದಲ್ಲಿ ಏರ್ಪಟ್ಟವೆಂದೂ, ಅವರಿಗಿಂತ ಪೂರ್ವದಲ್ಲಿದ್ದ ಗುರುಗಳಿಗೆ ಲೌಕಿಕ ಸಂಬಂಧವಿರಲಿಲ್ಲವೆಂದೂ ಧಾರಾಳವಾಗಿ ಹೇಳಬಹುದು." ಶೃಂಗಗಿರಿಯೆಂಬ ನಿರ್ಜನಾರಣ್ಯದ ಗಿರಿಯಲ್ಲಿ ವಿದ್ಯಾರಣ್ಯರು ಶೃಂಗೇರಿಪುರವನ್ನು ನಿರ್ಮಿಸಿ, ದೂರ ದೇಶದಿಂದ ಬ್ರಾಹ್ಮಣರನ್ನು ಕರೆಸಿ ಅಲ್ಲಿ ನೆಲೆಗೊಳಿಸಿದರೆಂಬ ಇವರ ಅಭಿಪ್ರಾಯವನ್ನು ಡಾ॥ ಡಿ.ವಿ. ಗುಂಡಪ್ಪನವರು ಅನುಮೋದಿಸಿ, ಆರ್. ನರಸಿಂಹಾಚಾರ್ಯರು ವಿದ್ಯಾತೀರ್ಥರಿಗಿಂತ ಹಿಂದಿನ ಗುರುಗಳ ವಿಷಯವೇನೂ ತಿಳಿಯದೆಂದುದನ್ನು ಆಧಾರವಾಗಿ ತೆಗೆದುಕೊಂಡಿದ್ದಾರೆ. "ಬಹುಶಃ ವಿದ್ಯಾರಣ್ಯರ ಕಾಲದವರೆಗೆ ಶೃಂಗಗಿರಿಯು ಕೇವಲ ತಪೋವನವಾಗಿ ಜನಸಂಘವಿಲ್ಲದುದಾಗಿ ಯತಿಗಳಿಗೂ ವಿರಕ್ತರಿಗೂ ಬೇಕಾದ ಕ್ಷೇತ್ರವಾಗಿತ್ತೆಂದು ತೋರುತ್ತದೆ. ಇಂತಹ ಸ್ಥಲದಲ್ಲಿ ಗುರುಪರಂಪರೆಗೆ ಆಗಾಗ ವಿಚ್ಛಿತ್ತಿ ಬರುತ್ತಿತ್ತು ಎನ್ನಬಹುದು" ಎಂದೂ ಅವರು ಹೇಳಿದ್ದಾರೆ. ಇಂತಹ ಮಠಮಾನ್ಯಗಳಿಲ್ಲದ ನಿರ್ಜನ ಪ್ರದೇಶದಲ್ಲಿ ಆಶ್ರಮ ಕಟ್ಟಿಕೊಂಡು ಇರುತ್ತಿದ್ದರು. ವಿದ್ಯಾರಣ್ಯರಿಗಿಂತ ಹಿಂದಿನ ನಿವೃತ್ತರಾದ ಗುರುಗಳು ಆದುದರಿಂದಲೇ 591 ಶಾಸನದಲ್ಲಿ "ಭಾರತೀತೀರ್ಥ ಶ್ರೀಪಾದಂಗಳೂ ಅವರ ಶಿಷ್ಯಾದಿಗಳೂ ಶೃಂಗೇರಿ ತೀರ್ಥದಲ್ಲೂ ಅನುಷ್ಠಾನ ಮಾಡಿಕೊಂಡಿಹುದಕ್ಕೆ" ದಾನಮಾಡಿದುದು. ಆದುದರಿಂದಲೇ ಯಾವ ಮಠದ ಅಧಿಪತಿಗಳೆಂದೂ ಅವರನ್ನು ಶಾಸನದಲ್ಲಿ ಹೇಳಿಲ್ಲ. ಆ ಮುಂದೆ ಅನುಷ್ಠಾನ ಮಾಡಿಕೊಂಡಿರಲು ಕೊಟ್ಟ ದಾನವದು. ಪ್ರವೃತ್ತ ಪ್ರವೃತ್ತಿಯ ವಿದ್ಯಾರಣ್ಯರು ಹಂಪೆಯ ದೇವಸ್ಥಾನ ಮಠದಲ್ಲಿ ನಿಂತು ವಿಜಯನಗರ ರಾಜ್ಯ ಸ್ಥಾಪನೆಯಲ್ಲಿ ನಿರತರಾಗಿದ್ದರು. ಮುಂದೆ ಅವರು ಹರಿಹರ ದ್ವಿತೀಯನಿಗೆ ಸ್ವತಂತ್ರ ಚಕ್ರವರ್ತಿಯಾಗಿ ಪಟ್ಟಕಟ್ಟಿದ ಮೇಲೆ ಆತನು 5911 ಶಾಸನದಲ್ಲಿ ಹೇಳಿರುವಂತೆ "ಮಠ ಅಗ್ರಹಾರವಿರಬೇಕೆಂದು ಬಿನ್ನಹಮಾಡಿಕೊಂಡು" ಅವರ ಅಪ್ಪಣೆ ಪಡೆದು ಅವನ್ನೆಲ್ಲಾ ಕಟ್ಟಿಸಿದುದು ತುರುಷ್ಕರ ದಾಳಿಯನ್ನೆದುರಿಸಲು 3ನೇ ಬಲ್ಲಾಳನು ಹಂಪೆಗೆ ಯುವರಾಜನ ಹೆಸರಿನಲ್ಲಿ ವಿಜಯನಗರವೆಂಬ ಹೆಸರಿಟ್ಟು ಅಲ್ಲಿ ಕಾರ್ಯಭಾರ ನಡೆಯಲು ಏರ್ಪಡಿಸಿದನು. ಹಳೇಬೀಡು ಹಂಪೆಗಳು ತುರುಷ್ಕರನ್ನೆದುರಿಸಲು ಸನ್ನದ್ಧ ಮಾಡುವ ಕಾರ್ಯಕ್ಷೇತ್ರಗಳಾದವು. ವೇದಭಾಷ್ಯಕಾರ ಸಾಯಣಾದಿಗಳು ಕೆಲಕಾಲ ಕಂಚಿಯಲ್ಲಿದ್ದು ಅವರ ಪರಮ ಗುರುವಾದ ಶ್ರೀಕಂಠನಾಥರಿಂದ ಉಪದೇಶ ಪಡೆದಂತಿದೆ. ಆದ್ದರಿಂದಲೇ ಅಲ್ಲಿ ಸಾಯಣನ ಶಾಸನವಿದೆ.

(ಮುಂದುವರಿಯುವುದು)

# ತಿಪಟೂರು ಕನ್ನಡ ಸಾಹಿತ್ಯ ಸಮ್ಮೇಳನ
## ಒಂದು ಸಮೀಕ್ಷೆ

—ಕೆ. ಬಸವರಾಜು

ತುಮಕೂರು ಜಿಲ್ಲೆಯ ಹೃದಯ ಕಲ್ಪವಾದ, ಕಲ್ಪತರುವಿನ ಬೀಡಾದ ತಿಪಟೂರಿನಲ್ಲಿ ಡಿಸೆಂಬರ್ 27, 28-1980ರಂದು ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನವು 'ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ' ವನ್ನು ಇಕ್ಕಿಮೆಟ್ಟುವಂತೆ ಅದ್ದೂರಿಯಿಂದ ನಡೆಯಿತು. ಕನ್ನಡನಾಡು ನುಡಿಯ ಅಭಿಮಾನಿಗಳು ಸಹಸ್ರಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಹೆಸರಾಂತ ಸಾಹಿತಿಗಳು, ಕವಿಗಳು ವಿವಿಧ ಗೋಷ್ಠಿಗಳಲ್ಲಿ ಭಾಗಿಗಳಾಗಿದ್ದರು. ಪರಮಪೂಜ್ಯ ಸಿದ್ಧಗಂಗಾಶ್ರೀಗಳವರಿಂದ ಸಮ್ಮೇಳನದ ಉದ್ಘಾಟನೆಯಾದುದು (ಉದ್ಘಾಟನಾಭಾಷಣ ನೋಡಿ) ಸಾಂಕೇತಿಕವಾಗಿತ್ತು. ತುಮಕೂರು ಜಿಲ್ಲೆಯ ಸಾಹಿತಿ ಭೀಷ್ಮ ಪ್ರೊ. ಕೆ. ವೆಂಕಟರಾಮಪ್ಪನವರು ಸಮ್ಮೇಳನಾಧ್ಯಕ್ಷರಾಗಿದ್ದುದು ಔಚಿತ್ಯಪೂರ್ಣವಾಗಿತ್ತು. (ಅಧ್ಯಕ್ಷ ಭಾಷಣ ನೋಡಿ) ಪ್ರೊ. ಜೆ. ಎಸ್. ಸಿದ್ಧಲಿಂಗಯ್ಯನವರಿಂದ ಪುಸ್ತಕ ಪ್ರದರ್ಶನದ ಉದ್ಘಾಟನೆ, ಹಂಪನಾರವರಿಂದ 'ಕಲ್ಪಗಂಗಾ'ದ ಬಿಡುಗಡೆ ಸಾಂಪ್ರದಾಯಿಕ ರೀತ್ಯಾ ನಡೆದುವು. ನಡೆದ ವಿವಿಧ ಗೋಷ್ಠಿಗಳು ವೈವಿಧ್ಯಮಯವಾಗಿದ್ದುವು.

ಸಾಹಿತ್ಯ ಗೋಷ್ಠಿಯಲ್ಲಿ ಶ್ರೀ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟರು ಓದಿದ 'ಕಾವ್ಯದ ಗೊತ್ತುಗುರಿಗಳು' ಸಾಮಾನ್ಯರಿಗೆ ಗೊತ್ತಾಗಲಿಲ್ಲ. 'ಸೃಜನಾತ್ಮಕ ಕೃತಿಗಳ ಮುಖಾಂತರವೇ ಸಾಹಿತ್ಯ ಚಳುವಳಿ ನಡೆಯಬೇಕು' ಎಂಬುದು ಅವರ ಮೂಲಾಭಿಪ್ರಾಯವಾಗಿತ್ತು. ಶ್ರೀ ಟಿ. ಆರ್. ಮಹದೇವಯ್ಯನವರು ಮಾಡಿದ ನಿಘಂಟುವಿನ ಸರ್ವೆ ಸಮಂಜಸವಾಗಿತ್ತು; ಸಂಶೋಧನಾತ್ಮಕವಾಗಿತ್ತು. ಇನ್ನು ಪಿ. ವಿ. ನಾರಾಯಣರಾವ್‌ರವರು, ಇತ್ತೀಚಿನ ಮೂರು ವರ್ಷಗಳಲ್ಲಿ ಹೊರಬಂದ 'ಶಿಖರಿ' 'ಪರ್ವ' 'ಸೃಷ್ಟಿ' 'ಮುಸ್ಸಂಜೆ' ಮುಂತಾದ ಕಾದಂಬರಿಗಳ ಸಮೀಕ್ಷೆ ನಡೆಸಿದರು. ಕೊನೆಯದಾಗಿ ಆರ್. ಎಸ್. ಅನಂತರಾಮಯ್ಯನವರ 'ಓದುವ ಹವ್ಯಾಸ ಮತ್ತು ಕನ್ನಡ ಪುಸ್ತಕೋದ್ಯಮ' ಎಂಬ ವಿಷಯ ತೀರ ಸಾಮಾನ್ಯವಾದುದಾದರೂ ಕಳಕಳಿಯಿಂದ ಕೂಡಿತ್ತು. ಗೋಷ್ಠಿಯ ಅಧ್ಯಕ್ಷರಾದ ಶ್ರೀ ಎಸ್. ಎಲ್. ಭೈರಪ್ಪನವರ ಭಾಷಣ, ಹುರುಪು ಹುಮ್ಮನಸ್ಸನ್ನು ಕೆರಳಿಸುವಂತಿತ್ತು ಶ್ರೀ ಹೀ. ಚಿ. ಶಾಂತವೀರಯ್ಯನವರ ಸಂಚಾಲಕತ್ವ ಚಿತ್ತಾಕರ್ಷಕವಾಗಿತ್ತು. ಇವಿಷ್ಟು 27-12-80ರಂದು ಜರುಗಿದ ಕಾರ್ಯಕ್ರಮಗಳು.

28–12–80ರಂದು ಬೆಳಗ್ಗೆ ಜನಪದ ಗೋಷ್ಠಿ ನೈರಾಶ್ಯದಾಕಳಿಕೆಯಿಂದಲೇ ಆರಂಭವಾಯಿತು. ಆ ನಿರಾಶೆಗೆ ಕಾರಣ, ಅಧ್ಯಕ್ಷಪದವಿಯನ್ನಲಂಕರಿಸಬೇಕಾಗಿದ್ದ ಶ್ರೀ ಹೆಚ್. ಎಲ್. ನಾಗೇಗೌಡರ ಗೈರುಹಾಜರಿ. ಆದರೂ ಪ್ರೊ. ಕೆ. ವೆಂಕಟರಾಮಪ್ಪ

ನವರೇ ಆ ಕಾರ್ಯವನ್ನು ನಿರ್ವಹಿಸಿ ಸಭಿಕರನ್ನು ಮುದಗೊಳಿಸಿದರು. ಆ ಗೋಷ್ಠಿಯ
ಉಪನ್ಯಾಸಕರ ಪೈಕಿ ಶ್ರೀ. ನ. ಶಂಕರನಾರಾಯಣರವರ 'ಜಾನಪದ ವೈಜ್ಞಾನಿ
ಅಧ್ಯಯನ ಎಂಬ ವಿಷಯ ಅಷ್ಟು ಪ್ರಕೃತೋಪಯೋಗಿಯಾಗಿರಲಿಲ್ಲ, ಜನಸಾಮಾನ್ಯ
ದೃಷ್ಟಿಯಿಂದ. ಶ್ರೀ ದೇಚ್. ವಿ. ವೀರಭದ್ರಯ್ಯನವರು ಹಾಡಿದ ಜಾನಪದ ರಾಗಿಕಲ್ಲು
ಎಷ್ಟು ಹೊತ್ತಾದರೂ ನಿಲ್ಲಲಿಲ್ಲ, ಆದರೂ ಆ ದನಿ ಕಿವಿಗಿಂಪಾಗಿತ್ತು. ಶ್ರೀ ಮತಿಘಟ್ಟದ
ಕೃಷ್ಣಮೂರ್ತಿಯವರ ಜಾನಪದ ವಿಷಯ ಸಂಗ್ರಹಣೆಯ ಸ್ವಾರಸ್ಯಕರ ಸಂಗತಿಗಳಂತೂ
ಮನಮೆಚ್ಚುವಂತಿದ್ದುವು.

ಕವಿಗೋಷ್ಠಿ ಅಷ್ಟೇನೂ ಕಂಗೊಳಿಸಲಿಲ್ಲ. ಕವಿಗೋಷ್ಠಿಯ ಅಧ್ಯಕ್ಷರಾದ ಸಾ.ಶಿ.
ಮರಳಯ್ಯನವರ ಭಾಷಣ, ಎಸ್. ಎಲ್. ಭೈರಪ್ಪನವರ ಭಾಷಣಕ್ಕೆ ಪ್ರತಿಕ್ರಿಯೆರೂಪ
ವಾಗಿತ್ತು. ಕವಿತಾಕೃಷ್ಣರವರ ಸಂಚಾಲಕತ್ವ ಅನಗತ್ಯ ಮಾತುಗಳಿಂದ ಜಾಲ್ತಿ ಪಡೆ
ಯಿತು.

ಸಮಾರೋಪ ಸಮಾರಂಭವು ಸದ್ದು ಸಂಭ್ರಮಗಳಿಂದ ಸುರುವಾಯಿತು. ಸಮಾ
ರೋಪ ಭಾಷಣಕಾರರಾಗಿ ಮುಖ್ಯ ಮಂತ್ರಿ ಶ್ರೀ ಆರ್. ಗುಂಡುರಾವ್‌ರವರು, ಮುಖ್ಯ
ಅತಿಥಿಗಳಾಗಿ ಶ್ರೀ ಕೆ. ಲಕ್ಕಪ್ಪ ಇವರುಗಳು ಆಗಮಿಸಿದ್ದರು. ಶ್ರೀ ಕೆ. ಲಕ್ಕಪ್ಪನವರು
ಕನ್ನಡನುಡಿ ನಾಡಿನ ಮೇಲಿರುವ ಅಭಿಮಾನವನ್ನು ತಮ್ಮ ಮಾತುಗಳಲ್ಲಿ ವ್ಯಕ್ತಪಡಿಸಿ
ದರು. ಕಾಸರಗೋಡು ಕನ್ನಡಿಗರ ಕೈಸೇರುವ ಮತ್ತು ವಿಶ್ವ ಕನ್ನಡ ಸಾಹಿತ್ಯ ಸಮ್ಮೇ
ಳನವನ್ನು ನಡೆಸುವ ನಿರ್ಧಾರಗಳನ್ನು ಮಾನ್ಯ ಮುಖ್ಯಮಂತ್ರಿಯವರು ಕನ್ನಡಜನ
ತೆಯ ಮುಂದಿಟ್ಟರು. ನಂತರ ಅನ್ಯತುರ್ತುಕಾರ್ಯನಿಮಿತ್ತ ಅವರು ತುರ್ತು ನಿರ್ಗಮಿಸಿದರು.

ಅಷ್ಟು ಹೊತ್ತಿಗೆ ಕೊನೆಯದಾದ ಸನ್ಮಾನ ಸಮಾರಂಭ ಪ್ರಾರಂಭವಾಯಿತು.
ವಿವಿಧ ಕ್ಷೇತ್ರಗಳಲ್ಲಿ ಘನಸೇವೆಯನ್ನು ಸಲ್ಲಿಸಿದ ಇದೇ ಜಿಲ್ಲೆಯ ಹನ್ನೆರಡು ಮಂದಿ ಗಣ್ಯ
ವ್ಯಕ್ತಿಗಳಿಗೆ ಸರಳಸನ್ಮಾನ ನಡೆಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಚುಂಚನ
ಗಿರಿ ಮಠದ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ವಹಿಸಿದುದು ಹೆಚ್ಚು ಅರ್ಥ
ಪೂರ್ಣವಾಗಿತ್ತು.

ಕಡೆಯದಾಗಿ ತಮ್ಮನ್ನು ಅಭಿಮಾನದಿಂದ ಆಹ್ವಾನಿಸಿ, ಅಧ್ಯಕ್ಷನನ್ನಾಗಿ ಮಾಡಿ
ಗೌರವಿಸಿ, ಸತ್ಕರಿಸಿ, ಸನ್ಮಾನಿಸಿದುದಕ್ಕೆ ತಮ್ಮ ಕೃತಜ್ಞತಾ ಸಲ್ಲಿಕೆಯ ಮಾತುಗಳನ್ನು
ಪ್ರೊ. ಕೆ. ವೆಂ. ರವರು ಆಡುವಾಗಲಂತೂ ಅವರ, ಎಲ್ಲರ ಕಣ್ಣಂಚಿನಲ್ಲಿ ನೀರು
ದುಂಬಿತು ಆ ಒಂದು ದೃಶ್ಯ ಹೃದಯ ಸ್ಪರ್ಶಿಯಾಗಿತ್ತು, ಯಾವತ್ತೂ ಮರೆಯ
ಲಾರದಾಗಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ ಊಟ, ವಸತಿಯ ವ್ಯವಸ್ಥೆ, ರಂಗಸಜ್ಜಿಕೆ, ಸಾಂಸ್ಕೃತಿಕ
ಕಾರ್ಯಕ್ರಮಗಳು ಅತ್ಯುತ್ತಮವಾಗಿದ್ದುವು. ಅದಕ್ಕಾಗಿ ಸ್ವಾಗತಸಮಿತಿಯವರು
ಮತ್ತು ವ್ಯವಸ್ಥಾಪಕ ವರ್ಗದವರು ಅಭಿನಂದನೀಯರು.

# ಜೈನದರ್ಶನ

—ಡಾ॥ ಎಂ.ಡಿ. ವಸಂತರಾಜ್

ಜೀವ :- ಜೀವದನಿರ್ದೇಶಕವಾಗಿ 'ಆತ್ಮ' ಎಂಬುದು ವಿಶೇಷವಾಗಿ ಬಳಕೆಯಲ್ಲಿರುವ ಪರ್ಯಾಯಪದ, ಜೀವದ ಲಕ್ಷಣವನ್ನು ಕುಂದ ಕುಂದಾಚಾರ್ಯರ ಪಂಚಾಸ್ತಿಕಾಯ ಪಾಹುಡದಲ್ಲಿ ಮುಂದಿನಂತೆ ಹೇಳಿದೆ.

ಜೀವೋತ್ತಿ ಹವದಿ ಚೇದಾ ಉವಓಗವಿ ಸೇಸಿದೋಪಹೂ ಕತ್ತಾ ।
ಭೋತ್ತಾಯ ದೇಹಮೆತ್ತೋಣ ಹಿ ಮುತ್ತೋ ಕರ್ಮ ಸಂಜುತ್ತೋ ॥೨೭॥
ಕಮ್ಮಮಲವಿಪ್ಪ ಮುಕ್ಕೋ ಉಡ್ಡಂಲೋಗಸ್ಸ ಅಂತಮಧಿಗಂತಾ ।
ಸೋ ಸವ್ವಣಾಣದರಿಸೀ ಲಹದಿ ಸುಹಮಣಿಂದಿಯ ಮಣಂತಂ ॥೨೮॥

ಅರ್ಥ :– ಜೀವನೆಂಬುವನು ಚೇತನಸ್ವರೂಪನು, ಜ್ಞಾನ ಮತ್ತು ದರ್ಶನಗಳ ಉಪಯೋಗವುಳ್ಳವನು, ಪ್ರಭುವು, ಕರ್ತೃವು, ಭೋಕ್ತೃವೂ ಆಗಿದ್ದಾನೆ. ತಾನು ಹೊಂದಿದ ಶರೀರದ ಅಳತೆಯುಳ್ಳವನು, ಮೂರ್ತನಲ್ಲದಿದ್ದರೂ ಕರ್ಮಸಂಯುಕ್ತನಾಗಿದ್ದಾನೆ. [೨೭] ಕರ್ಮದ ಕಲಂಕದಿಂದ ಪೂರ್ಣವಾಗಿ ಬಿಡುಗಡೆ ಹೊಂದಿ ಮೇಗಣಲೋಕದ ತುದಿಯನ್ನು ಸೇರುವನು. ಸರ್ವಜ್ಞನೂ, ಸರ್ವದರ್ಶಿಯೂ ಆಗಿದ್ದು ಅನಿಂದ್ರಿಯವಾದ ಅನಂತಸುಖವನ್ನು ಹೊಂದುವನು. [೨೮]

ಜೈನಮಾನ್ಯತೆಯನುಸಾರ ಜೀವರಾಶಿಯು ಅನಂತವಾದುದು. ಈ ಜೀವ ರಾಶಿಯನ್ನು ಪ್ರಧಾನವಾಗಿ ಸಂಸಾರಿ ಮತ್ತು ಮುಕ್ತ ಎಂದು ಎರಡು ಪ್ರಕಾರವಾಗಿ ವಿಭಾಗಿಸಿದೆ. ಕರ್ಮದ ಬಂಧನಕ್ಕೆ ಒಳಗಾಗಿ ಜನನಮರಣಗಳಿಗೊಳಗಾಗಿ ದೇವ ಮನುಷ್ಯ, ತಿರ್ಯಂಚ ಮತ್ತು ನಾರಕ ಎಂಬ ನಾಲ್ಕು ಗತಿಗಳಲ್ಲಿ ಅಲೆಯುವ ಜೀವರುಗಳು ಸಂಸಾರಿಜೀವರು. ಕರ್ಮಬಂಧನದಿಂದ ಪರಿಪೂರ್ಣವಾಗಿ ಬಿಡುಗಡೆ ಹೊಂದಿದವರು ಮುಕ್ತಜೀವರು. ಇವರನ್ನು ಸಾಧಾರಣವಾಗಿ ಸಿದ್ಧರು ಎಂದು ಹೆಸರಿಸುವ ರೂಢಿಯುದೆ.

ಚೇತನವು ಜೀವನ ವಿಶಿಷ್ಟಲಕ್ಷಣಗಳಲ್ಲಿ ಪ್ರಧಾನವಾದುದು. ಜ್ಞಾನ ಮತ್ತು ದರ್ಶನಗಳು ಚೇತನದ ಎರಡು ಅವಸ್ಥೆಗಳು. ಜೀವನು ಯಾವ ಅವಸ್ಥೆಯಲ್ಲಿಯೇ

ಇರಲಿ ತನ್ನ ಈ ಚೇತನಗುಣಧರ್ಮದಿಂದ ವಿರಹಿತನಾಗಿರುವುದಿಲ್ಲ. ಜೀವನು ಈ ಚೈತನ್ಯದ ಈ ಅವಸ್ಥಾಭೇದಗಳಾದ ಜ್ಞಾನ ಮತ್ತು ದರ್ಶನಗಳ ಉಪಯೋಗವುಳ್ಳವ ನಾಗಿರುತ್ತಾನೆ. ಚೈತನ್ಯದಂತೆ ಪ್ರಭುತ್ವ, ಕರ್ತೃತ್ವ ಮತ್ತು ಭೋಕ್ತೃತ್ವಗಳೂ ಇವನ ವಿಶಿಷ್ಟಗುಣಧರ್ಮಗಳೇ ಆಗಿವೆ. ದೇಹ ಪರಿಮಾಣವೆಂದರೆ ಜೀವನು ಸಾಂಸಾ ರಿಕಸ್ಥಿತಿಯಲ್ಲಿ ಯಾವ ಒಂದು ಕಾಲದಲ್ಲಿ ಯಾವ ಒಂದು ಶರೀರವನ್ನು ಹೊಂದಿರು ವನೋ ಆ ದೇಹದ ಆಳತೆಯುಳ್ಳವನಾಗಿರುತ್ತಾನೆ. ಮುಕ್ತನಾದಾಗ ತಾನು ಹಿಂದೆ ಯಾವ ಶರೀರದಿಂದ ಮುಕ್ತಿ ಪಡೆದನೋ ಆ ಶರೀರದಿಂದ ಕಿಂಚಿನ್ಮಾತ್ರ ಕಡಿಮೆಯು ದಾದ ಪರಿಮಾಣವುಳ್ಳವನಾಗಿರುತ್ತಾನೆ. ಕರ್ಮಬಂಧದ ಅವಸ್ಥೆಯಲ್ಲಿದ್ದರೂ ಜೀವನು ಮೂರ್ತನಾಗಿರುವುದಿಲ್ಲ. ಮೂರ್ತಗುಣಧರ್ಮ ಪುದ್ಗಲದ ಗುಣಧರ್ಮವಾಗಿದೆ. ಕರ್ಮಕಲಂಕದ ಭಾರದಿಂದ ಬಿಡುಗಡೆ ಹೊಂದಿದ ಜೀವನು ಊರ್ಧ್ವಗಾಮಿಯಾಗಿ ಲೋಕದ ತುದಿಯನ್ನು ಸೇರಿರುವನು. ಸರ್ವಜ್ಞನೂ, ಸರ್ವದರ್ಶಿಯೂ, ಆದ ಅವನು ಅಶರೀರಿಯಾಗಿದ್ದು ಇಂದ್ರಿಯ ಸಂಭೂತವಲ್ಲದ ಆತ್ಮಾಧಿಷ್ಠಿತವಾದ ಅನಂತಸುಖ ವನ್ನು ಹೊಂದುವನು.

ಅಜೀವ :— ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ-ಇವು ಐದು ಅಜೀವ ದ್ರವ್ಯಭೇದಗಳು. ಜೀವದ ಚೇತನ ಗುಣವಿಲ್ಲವಾದ್ದರಿಂದ ಇವುಗಳನ್ನು ಅಜೀವ ದ್ರವ್ಯಗಳೆಂದು ಹೇಳಿದೆ. ಇವುಗಳಲ್ಲಿ ಸ್ಪರ್ಶ, ರಸ, ಗಂಧ ಮತ್ತು ವರ್ಣ ಗಳುಳ್ಳದ್ದು ಪುದ್ಗಲವು. ಇಂದ್ರಿಯಗ್ರಾಹ್ಯವಾಗಿರುವುದರಿಂದ ಇದನ್ನು ಮೂರ್ತ ದ್ರವ್ಯವೆಂದು ಕರೆಯುವರು. ಶಬ್ದವು ಇದರ ಪರ್ಯಾಯ ಮಾತ್ರವಾಗಿದೆ. ಇದರ ಸಿದ್ಧಾಂತಗಳಲ್ಲಿ ಹೇಳಲಾಗಿರುವ ಪೃಥಿವಿ, ಆಪ್, ತೇಜಸ್, ವಾಯು ಮತ್ತು ಮನಸ್ಸು ಗಳು ಈ ಪುದ್ಗಲ ದ್ರವ್ಯದಲ್ಲಿಯೇ ಅಂತರ್ಗತವಾಗಿವೆ. ಪುದ್ಗಲವು ಅಣು ಮತ್ತು ಸ್ಕಂದ ಎಂದು ಪ್ರಧಾನವಾದ ಎರಡು ಭೇದವುಳ್ಳದ್ದಾಗಿದೆ. ಅಣುಗಳ ಪೂರಣ ಮೂಲಕ ಸ್ಕಂಧಗಳಾಗುವುವು. ಈ ರೀತಿಯದಾದ ಪೂರಣ ಮತ್ತು ಗಲನ ಕ್ರಿಯಾ ಲಕ್ಷಣದಿಂದ ಪುದ್ಗಲ ಎಂಬ ಹೆಸರ ಅನ್ವರ್ಥವಾಗುವುದು. ಈ ಪುದ್ಗಲವನ್ನು ಮತ್ತೊಂದು ಅಪೇಕ್ಷೆಯಿಂದ ಸ್ಥೂಲ, ಸೂಕ್ಷ್ಮ, ಸ್ಥೂಲ ಮತ್ತು ಸ್ಥೂಲ—ಸ್ಥೂಲ ಎಂದು ಆರು ಪ್ರಕಾರವಾಗಿ ವಿಂಗಡಿಸಿದ್ದಾರೆ. ಪರಮಾಣು, ಕರ್ಮವರ್ಗಣಾ, ಚಕ್ಷು ಹೊರತಾದ ಇತರ ಇಂದ್ರಿಯಗಳ ವರ್ಣ ಮುಂತಾದ ವಿಷಯಗಳು, ಛಾಯಾ, ಜಲ ಮತ್ತು ಪೃಥ್ವಿ ಇವು ಅನುಕ್ರಮವಾಗಿ ಸೂಕ್ಷ್ಮ—ಸೂಕ್ಷ್ಮಾದಿ ವಿಭಾಗಗಳಿಗೆ ದೃಷ್ಟಾಂತಗಳು.[10] ಧರ್ಮ ಮತ್ತು ಅಧರ್ಮಗಳು ಅಜೀವ ದ್ರವ್ಯದ ಎರಡನೇ ಮತ್ತು ಮೂರನೇ ಭೇದಗಳು. ಲೋಕ ಸಾಧಾರಣವಾಗಿ ಧರ್ಮ ಮತ್ತು ಅಧರ್ಮ

---

10 ಉತ್ಪಾದವ್ಯಯ ಧ್ರೌವ್ಯ ಯುಕ್ತಂ ಸತ್—ಇದೇ. ತ. ಸೂ. ಅ. 5 ಸೂ. 30

ಪದಗಳು ಪುಣ್ಯ,–ಪಾಪ; ಒಳ್ಳೆಯದು–ಕೆಟ್ಟದ್ದು; ನ್ಯಾಯ-ಅನ್ಯಾಯ; ಸದಾಚಾರ ದುರಾಚಾರ, ಎಂದು ಮುಂತಾದ ಅರ್ಥಗಳಲ್ಲಿ ಪ್ರಯುಕ್ತವಾಗಿವೆ. ಜೈನಮತದಲ್ಲಿ ಈ ಪದಗಳು ಲೋಕ ಸಾಧಾರಣವಾದ ಈ ಅರ್ಥಗಳಲ್ಲಿ ಪ್ರಯುಕ್ತವಾಗಿಲ್ಲವೆಂದೇನಿಲ್ಲ. ಉದಾಹರಣೆಯಾಗಿ—'ದೇಶಯಾಮಿ ಸಮೀಚೀನಾಂ ಧರ್ಮಂ ಕರ್ಮಾಣಿ ಬರ್ಹಣಂ' ಎನ್ನುವಲ್ಲಿ ಧರ್ಮಪದವು ಲೋಕಸಾಧಾರಣವಾದ ಸದಾಚಾರ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಆದರೆ ದ್ರವ್ಯ ಭೇದ ಸೂಚಕವಾಗಿ ಪ್ರಯುಕ್ತವಾಗಿರುವಲ್ಲಿ ಈ ಪದಗಳು ಮುಂದಿನಂತೆ ಜೈನ ಮತದಲ್ಲಿ ವಿಲಾತ್ರ ಕಂಡುಬರುವ ಸೈತಿದ್ಧಾಂತಿಕ ಅರ್ಥವುಳ್ಳವಾಗಿವೆ. ಗಮನೋದ್ಯತವಾದ ಮೀನಿಗೆ ನೀರು ಸಹಕಾರಿಯಾಗಿರುವಂತೆ ಗಮನೋದ್ಯತ ಜೀವ ಮತ್ತು ಪುದ್ಗಲಗಳಿಗೆ ಧರ್ಮದ್ರವ್ಯವು ಸಹಕಾರಿಯಾಗಿದೆ. ಹೀಗೆಯೇ ಸ್ಥಿತಿ ಎಂದರೆ ನಿಲುಗಂಡಿಗೆ ಉದ್ಯತವಾದ ಜೀವ ಪುದ್ಗಲಗಳಿಗೆ ಅಧರ್ಮವು ಸಹಕಾರಿಯಾಗಿದೆ. ಆಕಾಶವು ಅಜೀವ ದ್ರವ್ಯದ ನಾಲ್ಕನೇ ಪ್ರಕಾರವಾಗಿದೆ. ಇದು ಇತರ ಎಲ್ಲಾ ದ್ರವ್ಯಗಳಿಗೆ ಅವಕಾಶ ಕೊಡುವ ಗುಣವುಳ್ಳದ್ದಾಗಿದೆ. ಕಾಲವು ಅಜೀವ ದ್ರವ್ಯದ ಐದನೇ ಭೇದವಾದ ಕಾಲವು ವ್ಯವಹಾರ ಮತ್ತು ಪರ ಮಾರ್ಥ ಕಾಲ ಎಂಬ ಭೇದಗಳಿಂದ ಎರಡು ಪ್ರಕಾರವಾಗಿದೆ. ಲೋಕ ಸಾಧಾರಣ ವಾಗಿ ಬಳಕೆಯಲ್ಲಿರುವ ಸಮಯ, ಅವಲಿ, ಘಳಿಗೆ, ಗಂಟೆ, ಮುಂತಾದುವು ಕಾಲ ವಿಭಾಗಗಳು ವ್ಯವಹಾರ ಕಾಲ ಭೇದಗಳು. ದ್ರವ್ಯಗಳಲ್ಲಿ ಪರ್ಯಾಯಗಳ ಹೇತು ವಾದ ವರ್ತನೆಯು ಪರಮಾರ್ಥ ಕಾಲ ಲಕ್ಷಣ ಹೀಗೆ ಜೀವ ದ್ರವ್ಯ ಮತ್ತು ಅಜೀವ ದ್ರವ್ಯದ ಪುದ್ಗಲ, ಧರ್ಮ, ಅಧರ್ಮ, ಆಕಾಶ ಹಾಗೂ ಕಾಲ ಎಂಬ ಐದು ಭೇದ ಗಳು ಒಟ್ಟು ಸೇರಿ ಆರು ದ್ರವ್ಯಗಳೆಂದು ಗಣನೆ ಹೊಂದಿವೆ.

ಈ ಆರು ದ್ರವ್ಯಗಳಿಂದ ತುಂಬಿದುದೇ ಲೋಕವು 'ಷಡ್ ದ್ರವ್ಯ ಭರಿತೋ ಲೋಕಃ' ಎಂದು ಲೋಕದ ಲಕ್ಷಣವನ್ನು ಹೇಳಿವೆ.

ಆಸ್ರವ :- ಜೀವನು ಸಾಂಸಾರಿಕ ಸ್ಥಿತಿಯಲ್ಲಿ ಹೇಗೆ ಕರ್ಮವಶನಾಗಿ ಅವಸ್ಥಾಂ ತರಗಳನ್ನು ಹೊಂದಿ ಸುಖ ದುಃಖ ಭಾಗಿಯಾಗುವನು, ಹಾಗೂ ಈ ಕರ್ಮದಿಂದ ಬಿಡುಗಡೆ ಪಡೆದು ಶುದ್ಧ ರೂಪನಾಗಿ ಆತ್ಮಾಯತ್ತವಾದ ಅನಂತ ಸುಖವನ್ನು ಹೇಗೆ ಹೊಂದುವನು ಎಂಬುದು ಆಸ್ರವಾದಿ ಐದು ತತ್ವಗಳ ಪ್ರರೂಪಣೆಯ ವಿಷಯವಾಗಿದೆ. ಪರಲೋಕವನ್ನು ಒಪ್ಪಿರುವ ಸಿದ್ಧಾಂತಗಳೆಲ್ಲವೂ ಕರ್ಮ ಸಂಬಂಧಿಯಾದ ಅಂಶ ವೊಂದರ ಬಗ್ಗೆ ಸಹಮತವುಳ್ಳವಾಗಿವೆ. ಅದೆಂದರೆ ಪ್ರತಿಯೊಂದು ರಾಗದ್ವೇಷಯುಕ್ತ ವಾದ ಕರ್ಮವು ಅವನ ಮೇಲೆ ಸಂಸ್ಕಾರ ಉಂಟುಮಾಡುತ್ತದೆ. ಕರ್ಮ ಅಥವಾ ಅದರ ಪ್ರವೃತ್ತಿಯು ಕ್ಷಣಕಾಲದ ವ್ಯಾಪ್ತಿಯದಿಂದಾಗೂ ಸಂಸ್ಕಾರವೂ ಬಹು ದೀರ್ಘ ಕಾಲ ಉಳಿದಿರುತ್ತದೆ. ಸಂಸ್ಕಾರದಿಂದ ಪ್ರವೃತ್ತಿಯುಂಟಾಗುವುದು. ಮತ್ತೆ ಪ್ರವೃತ್ತಿ

ಯಿಂದ ಸಂಸ್ಕಾರವುಂಟಾಗುವುದು. ಹೀಗೆ ಪ್ರವೃತ್ತಿ ಮತ್ತು ಸಂಸ್ಕಾರಗಳ ಪರಂಪರೆಯೂ ಅನಾದಿ ಕಾಲದಿಂದ ನಡೆದು ಬಂದಿದೆ. ಈ ಸಂಸ್ಕಾರವು ಶುಭಪ್ರಕಾರದ್ದಾಗಿರಬಹುದು. ಅಥವಾ ಅಶುಭ ಪ್ರಕಾರದ್ದಾಗಿರಬಹುದು. ಸಂಸ್ಕಾರದ ಈ ಪ್ರಕರಣಗಳನ್ನು ಧರ್ಮ, ಅಧರ್ಮ, ಪುಣ್ಯಕರ್ಮ. ಪಾಪಕರ್ಮ, ಎಂದು ಮುಂತಾಗಿ ಕರೆಯಲಾಗಿದೆ. ಈ ಸಂಸ್ಕಾರ ರೂಪದ ಕರ್ಮದ ಸ್ವರೂಪವು ಜೈನ ಸಿದ್ಧಾಂತದಲ್ಲಿ ಇತರ ಸಿದ್ಧಾಂತಗಳ ಅಪೇಕ್ಷೆಯಿಂದ ಆಂಶಿಕವಾಗಿ ಭಿನ್ನತರವಾಗಿದೆ. ಜೈನ ಸಿದ್ಧಾಂತಾನುಸಾರ ಈ ಸಂಸ್ಕಾರವು ಕೇವಲ ಭಾವರೂಪ ಮಾತ್ರದ್ದಾಗಿರದೆ ದ್ರವ್ಯಾತ್ಮಕವಾದ ವಸ್ತು ಸ್ವರೂಪವುಳ್ಳದ್ದಾಗಿಯೂ ಇದೆ. ಇದರ ಸ್ವರೂಪವನ್ನು ಕುಂದ ಕುಂದ ಸ್ವಾಮಿಯವರು ಮುಂದಿನಂತೆ ಹೇಳಿದ್ದಾರೆ.

**ಪರಿಣಮದಿ ಜದಾ ಅಪ್ಪಾ ಸುಹಮ್ಮಿ ಅಸುಹಮ್ಮಿ ರಾಗದೋಸಜುದೋ।**
**ತಂ ಪವಿಸದಿ ಕಮ್ಮರಯಂ ಣಾಣಾವದಿ ಭಾವೇಹಿಂ ॥95॥ ಪ್ರ. ಸಾ. ಅ. ೩**

"ರಾಗ ದ್ವೇಷಯುಕ್ತನಾದ ಆತ್ಮನು ಶುಭ ಅಥವಾ ಅಶುಭ ಕ್ರಿಯೆಗಳಲ್ಲಿ ಪ್ರವೃತ್ತಿ ಹೊಂದಿದಾಗ ಕರ್ಮ ರಜವು ಜ್ಞಾನಾವರಣಾದಿ ರೂಪದಿಂದ ಅವನಲ್ಲಿ ಪ್ರವೇಶಿಸುವುದು."

(ಮುಂದುವರಿಯುವುದು)

---

# ಮಧುರ ಚೆನ್ನರಿಗೆ

**—ಭುಜೇಂದ್ರ ಮಹೀಶವಾಡಿ**

ಜಗದೆಲ್ಲ ಭಾಷೆಗಳ ಧರ್ಮಗಳ ತಳ ತಿಳಿದು
ನೋಡುವ ಜಿಜ್ಞಾಸೆ ತೋರಿದ ತವಸಿಗಳೆ
ತತ್ವ ದೊಳಮುತ್ತುಗಳನೆತ್ತಿದನುಭಾವಿಗಳೆ
ಕಳೆದೊಗೆದಿರೇನಂಗದಂಗಿಯನು ನೀವಿಂದು !
ಕಾಳಿನಿರ್ಜೇಳೆ ನೇಹಿಗಳಾವು ಕಲಿತಿಹೆವು
ನಿಮ್ಮ 'ಪೂರ್ವರಂಗ'ದೊಳನುಭಾವದಭಿನಯವ
'ಕಾಳರಾತ್ರಿ'ಯ ಕಳೆದು 'ಬೆಳಗು' ಕಂಡಿಹೆವು, ತವ
ಕಾರುಣ್ಯ ಜಲಧಿಯಲಿ ಪರಿಶುದ್ಧಿ ಪಡೆದಿಹೆವು !
ಮನೆವರೆಗೆ ಬಂದೆಮ್ಮ ಹರಸಿಹೋಗಿಹ ಗುರುವೆ
ನಿಮ್ಮಮರ ಪ್ರೀತಿಯನು ಎಂದಾರೆ ಮರೆಯುವೆವೆ !
ಅಂದು ಬರುವುದಾಗದೆ ಉಳಿದೆಮ್ಮನಿನ್ನುವರೆ
ಕರೆಯುತಿದೆ ನಿಮ್ಮ ಕರೆಯೋಲೆ ; ಬರುವೆವಾದರೆ....
ಹೇಳುವಿರ, ನೀವಿರುವ ತಾಣವೆಲ್ಲಿದೆಯೆಂದು ?
ನೀರ್ನೀಲಿಯಾಗಸವೆ ? ನೆಲೆಸೇರುವೆವೆ ಬಂದು ?.

# ಜೈನ ವಾಙ್ಮಯದಲ್ಲಿ ಭವಾವಳಿ

—ಕಮಲಾ ಹಂಪನಾ.

ಭಾರತೀಯ ವಾಙ್ಮಯದಲ್ಲಿ ಪುರಾಣಗಳಿಗೆ ಗಣ್ಯಸ್ಥಾನ ಕೊಟ್ಟಿದ್ದಾರೆ. ಹಿಂದಿನವರು ಈ ಪುರಾಣಗಳ ಲಕ್ಷಣಗಳನ್ನು ಈ ರೀತಿ ನಿರೂಪಿಸಿದ್ದಾರೆ; ಸರ್ಗಶ್ಚ ಪ್ರತಿಸರ್ಗಶ್ಚ ವಂಶೋಮನ್ವಂತರಾಣಿಚ। ವಂಶಾನುಚರಿತಂಚೈವ ಪುರಾಣಂ ಪಂಚ ಲಕ್ಷಣಂ. ಅಂದರೆ ಪುರಾಣದಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಪರಂಪರೆಗಳ ಚರಿತೆ ಎಂಬ ಅಯ್ದು ಲಕ್ಷಣಗಳಿರುತ್ತವೆ. ಜೈನ ಪುರಾಣಗಳಲ್ಲಿ ಈ ಅಯ್ದೂ ಲಕ್ಷಣಗಳು ಇರಬಹುದು, ಇವುಗಳಲ್ಲಿ ಒಂದೆರಡು ಇಲ್ಲದಿರಬಹುದು. ಆದರೆ ಇವುಗಳ ಜತೆಗೆ ಇನ್ನೂ ಕೆಲವು ಲಕ್ಷಣಗಳು ಅಲ್ಲಿ ಕಂಡುಬರುತ್ತವೆ. ತೀರ್ಥಂಕರ ಪುರಾಣಗಳಲ್ಲಿ ಪಂಚಕಲ್ಯಾಣಗಳು ಬರುತ್ತವೆ. ಒಟ್ಟಿನಲ್ಲಿ ಜೈನ ಪುರಾಣಗಳು ತ್ರಿಷಷ್ಟಿ ಶಲಾಕಾ ಪುರುಷರ ಚರಿತೆಗಳು. ಜೈನವಾಙ್ಮಯ ಬಹು ವಿಸ್ತಾರವಾದುದು. ಪ್ರಾಕೃತ (ಅದರಲ್ಲೂ ಮಾಗಧಿ ಶೌರಸೇನಿ ಅಪಭ್ರಂಶ ಪ್ರಾಕೃತ), ಸಂಸ್ಕೃತ ಮತು ದೇಶೀಯ ಭಾಷೆಗಳಲ್ಲಿ ಜೈನ ವಾಙ್ಮಯ ಪ್ರಾಚೀನ ಕಾಲದಿಂದ ರಚಿತವಾಗಿರುವುದು ಕಂಡುಬರುತ್ತದೆ.

ಜೈನ ವಾಙ್ಮಯದಲ್ಲಿ ಅಹಿಂಸೆ, ಅಸ್ತೇಯ, ಅಪರಿಗ್ರಹ, ಸತ್ಯ, ಬ್ರಹ್ಮಚರ್ಯ ಎಂಬ ಅಯ್ದು ಅಣುವ್ರತಗಳು, ಜೀವ-ಅಜೀವದ ಸ್ವರೂಪ, ಕರ್ಮ ಸಿದ್ಧಾಂತ– ಇವುಗಳ ಪ್ರಸ್ತಾಪ ದೀರ್ಘವಾಗಿರುತ್ತದೆ ಇವೆಲ್ಲಾ ಮುಖ್ಯವಾಗಿ ಜೈನ ತತ್ತ್ವದ ಅವಿಭಾಜ್ಯ ಅಂಗಗಳು. ಆದರೆ ಓದುಗನಿಗೆ, ಅದರಲ್ಲೂ ಜೈನೇತರ ವಾಚಕನಿಗೆ ಇವು ಎಷ್ಟರ ಮಟ್ಟಿಗೆ ರುಚಿಸುತ್ತವೆಂಬುದು ಸಂಶಯಾಸ್ಪದ. ಆದರಿಂದ ಇದನ್ನು ಬಲ್ಲ ಜೈನ ಪ್ರಾಜ್ಞ ಲೇಖಕರು ಜೈನ ಸಿದ್ಧಾಂತದ ಸ್ವಾರಸ್ಯ, ಸಾರ ಎಲ್ಲರಿಗೂ ಆಸ್ವಾದ್ಯವಾಗುವಂತೆ ಹೊಸತಂತ್ರವೊಂದನ್ನು ಕಲ್ಪಿಸಿಕೊಂಡರು. ಅದೇ ಭವಾವಳಿ. ಜೀವನದ ಹುಟ್ಟು ಬೆಳವಣಿಗೆ ಸಾವು, ಮತ್ತೆ ಹುಟ್ಟು ಸಾವು–ಹೀಗೆ ಮರುಹುಟ್ಟು ಮರುಸಾವುಗಳ ಒಂದು ನಿರಂತರ ಚಕ್ರಗತಿಯ ಪರಿಭ್ರಮಣೆಯನ್ನು ಭವಾವಳಿಯ ತಂತ್ರ ಚೆನ್ನಾಗಿ ಕನ್ನಡಿಸುತ್ತದೆ. ಬಿಗಿಯಾಗಿ, ಸಪ್ಪೆಯಾಗಿ, ಅರೋಚಕವಾಗಿ, ನಿಲ್ಲಬಹುದಾದ ಸಿದ್ಧಾಂತದ ಸಾರವನ್ನು ಭವಾವಳಿಯ ಎರಕದಲ್ಲಿ ಹಾಕಿ ತೆಗೆದದ್ದರಿಂದ ಅದಕ್ಕೊಂದು ಆಕರ್ಷಣೆ ಉಂಟಾಯಿತು. ಓದುಗರಿಗೆ ಆಸಕ್ತಿ ತಲೆದೋರಿತು. ಅದನ್ನು ಓದುವಾಗ ಜೀವನದ ಅನಂತಯಾತ್ರೆಯ ರಾಟಳಗತಿಯೂ ಗೊತ್ತಾಗುತ್ತದೆ.

ಬೇಸರವೂ ಕಾಣಿಸುವುದಿಲ್ಲ. ಹೀಗಾಗಿ ಭವಾವಳಿ ಜೈನ ವಾಙ್ಮಯವನ್ನು ಜನಪ್ರಿಯ ಗೊಳಿಸುವಲ್ಲಿ ಒಂದು ಯಶಸ್ವಿಯಾದ ಮಾಧ್ಯಮವಾಗಿ, ಸಂಕೇತವಾಗಿ ಪರಿಣಯಿಸಿತು. ಪುರಾಣಗಳನ್ನು ಸಾಮಾನ್ಯ ಧಾರ್ಮಿಕಸ್ತರದಿಂದ ಕಾವ್ಯದ ಎತ್ತರಕ್ಕೆ ಕೊಂಡೊಯ್ಯುವ ಸಾಧನವಾಗಿ ಭವಾವಳಿ ಸಲ್ಲಿಸಿದ ಕಾಣಿಕೆ ಅತ್ಯಮೂಲ್ಯವಾದುದು. ನೀತಿ, ಉಪ ದೇಶಗಳ ನೇರ ಬೋಧನ ವಿಧಾನಕ್ಕಿಂತ ಈ ಪರ್ಯಾಯ ಮಾರ್ಗ ಪರಿಣಾಮಕಾರಿ ಯಾದುದು. ಸಹೃದಯನನ್ನು ಓದು ಎಷ್ಟರಮಟ್ಟಿಗೆ ಲವಲವಿಕೆಯಿಂದ ಪ್ರಸನ್ನ ವಾಗಿರಿಸುತ್ತದೆಂಬುದಕ್ಕೆ ಕನ್ನಡದ ಹಳೆಯ ಗದ್ಯಗ್ರಂಥವಾದ ವಡ್ಡಾರಾಧನೆಯಿಂದ ಒಂದು ಪ್ರಸಂಗವನ್ನು ಇಲ್ಲಿ ಉದಾಹರಿಸುವುದರ ಮೂಲಕ ಸ್ಪಷ್ಟಪಡಿಸಬಹುದು.

ಮಗಧ ದೇಶದ ಪಾಟಲಿಪುತ್ರವನ್ನು ನಂದದೊರೆ ಆಳುತ್ತಿದ್ದಾಗ ಒಮ್ಮೆ ಚಾಣ ಕ್ಯನನ್ನು ಅವಮಾನ ಪಡಿಸಿದ. ಚಾಣಕ್ಯ ಪ್ರತಿಜ್ಞೆ ಮಾಡಿ ನಂದನನ್ನು ನಾಶ ಮಾಡಿ ತನ್ನ ಶಿಷ್ಯ ಚಂದ್ರಗುಪ್ತನನ್ನು ರಾಜನನಾಗಿ ಮಾಡಿದ. ಚಂದ್ರಗುಪ್ತನ ಮಗ ಬಿಂದುಸಾಗರ, ಅವನ ಮಗ ಅಶೋಕ. ಅವನ ಮಗ ಕುಣಾಲ. ಈ ಕುಣಾ ಲನ ಮಗನೇ ಸಂಪ್ರತಿ ಚಂದ್ರಗುಪ್ತ. ಈತ ರಾಜ್ಯವಾಳುತ್ತಿರುವಾಗ ಒಂದು ಸಲ ಸಮಾಧಿಗುಪ್ತರೆಂಬ ಆಚಾರ್ಯರು ಬಂದರು. ಸಂಪ್ರತಿ ಚಂದ್ರಗುಪ್ತ ಮಹಾರಾಜ ಹೋಗಿ ನಮಸ್ಕರಿಸಿ ತನ್ನ ಜನ್ಮಾಂತರಗಳ ವಿಷಯವಾಗಿ ಕೇಳಿದ. ಆಗ ಅವರು ಅವನ ಭವಾವಳಿಗಳನ್ನು ಹೀಗೆ ಹೇಳಿದರು.

ಅವಂತಿ ದೇಶದ ವೈದಿಶ ಪಟ್ಟಣವನ್ನು ಜಯವರ್ಮ ಆಳುತ್ತಿದ್ದ. ಹತ್ತಿರದ ಪರಾಳಕೂಟವೆಂಬ ಊರಿನಲ್ಲಿ ದೇವಿಲ-ಪೃಥ್ವಿಶ್ರಿ ಎಂಬ ವರ್ತಕರಿದ್ದರು. ಪೃಥ್ವಿಶ್ರೀ ಗರ್ಭಿಣಿಯಾಗುತ್ತಿದ್ದಂತೆ ಅವರ ಧನಕನಕ ಹಾಳಾಯಿತು. ವ್ಯಾಪಾರಕ್ಕೆಂದು ಗಾಡಿ ಗಳಲ್ಲಿ ಸರಕುಗಳನ್ನು ತುಂಬಿ ಹೊರಟಾಗ ದಾರಿಗಳ್ಳರು ಲೂಟಿ ಮಾಡಿದರು. ಅದೇ ಸಮಯದಲ್ಲಿ ಪೃಥ್ವಿಶ್ರೀ ಗಂಡು ಮಗು ಹೆತ್ತಳು. ನಂದಿಮಿತ್ರನೆಂದು ಹೆಸ ರಿಟ್ಟರು. ಮಗುವಿಗೆ ಎರಡು ತಿಂಗಳು ತುಂಬುತ್ತಿದ್ದಂತೆ ತಾಯಿಯೂ ಸತ್ತು ಹೋದಳು. ನಂಟರಿಷ್ಟರು ನಂದಿಮಿತ್ರನನ್ನು ಸಾಕಿದ್ದಕ್ಕೆ, ಅವರಿಗೂ ಅದೇಗತಿ ಯಾಯಿತು. ಆಗ ಅವರೆಲ್ಲ ಸೇರಿ ತಬ್ಬಲಿಯನ್ನು ಓಡಿಸಿಬಿಟ್ಟರು. ನಂದಿಮಿತ್ರ ಅಲೆದಾಡುತ್ತಾ ಭಿಕ್ಷೆ ಬೇಡುತ್ತಾ ಹೇಗೋ ಕಾಲ ನೂಕುತ್ತಿದ್ದು ಹದಿನೈದನೆಯ ವಯಸ್ಸಿಗೆ ವೈದಿಶ ಪಟ್ಟಣಕ್ಕೆ ಬಂದ.

ಅಲ್ಲಿ ಕಾಷ್ಠಕೂಟ ಎಂಬುವನು ಕಟ್ಟಿಗೆ ಹೊರೆ ಹೊತ್ತು ಪಟ್ಟಣಕ್ಕೆ ಬರು ತ್ತಿದ್ದ. ಅವನೂ ನಂದಿ ಮಿತ್ರನೂ ಮಾತಾಡುತ್ತಾ ಒಂದು ತೋಟದಲ್ಲಿ ವಿಶ್ರಾಂತಿ ಗೆಂದು ನಿಂತರು. ನಂದಿಮಿತ್ರ ತನ್ನ ತಲೆಗೆ ಆಧಾರವಾಗಿ, ಎಂಟು ಜನ ಕೂಡಿ

ದರೂ ಅಲುಗಿಸಲಾರದ ಬಂಡೆಯನ್ನು ತಂದು ಇಟ್ಟುಕೊಂಡನು ಕಾಷ್ಠಕೂಟ ಶಿವನನ್ನು ತನ್ನ ಮನೆಗೆ ಕರೆದುಕೊಂಡ. ಹೋಗಿ ಊಟ ಹಾಕಿ ತನ್ನಲ್ಲೇ ಇರಿಸಿ ಕೊಂಡ. ಹತ್ತು ಮಂದಿ ತರುವಷ್ಟು ಕಟ್ಟಿಗೆ ಹೊರೆಯನ್ನು ನಂದಿಮಿತ್ರ ಒಬ್ಬನೇ ತರುತ್ತಿದ್ದ. 'ಊಟ ಮಾತ್ರ ಹೊಟ್ಟೆತುಂಬಾ ಹಾಕಬೇಡ. ಹೆಚ್ಚು ಎಣ್ಣೆ ಹಾಕ ಬೇಡ ಸ್ನಾನಕ್ಕೆ ಕೇಳಿದರೂ ಎರೆಯಬೇಡ' ಎಂದು ಕಾಷ್ಠಕೂಟ ತನ್ನ ಹೆಂಡತಿ ಜಯಘಂಟಿಗೆ ತಾಕೀತು ಮಾಡಿದ್ದ. ಇದರಂತೆ ಬದುಕು ನಡೆಯಿತು. ಕಾಷ್ಠ ಕೂಟ ಹಣವಂತನಾದ.

ಒಂದು ದಿನ ಜಯಘಂಟಿ ನಂದಿಮಿತ್ರನ ಮೇಲೆ ಕರುಣೆಯಿಂದ ಹೊಟ್ಟೆ ತುಂಬ ಊಟ ಬಡಿಸಿದಳು. ತೃಪ್ತಿಯಾಗಿ ಉಂಡ ನಂದಿಮಿತ್ರ ಮಾರನೆ ದಿನ ಕಾಷ್ಠಕೂಟನನ್ನು 'ಅಯ್ಯಾ ನನಗೆ ಉಟ್ಟುಕೊಳ್ಳಲು ಏನೂ ಇಲ್ಲ. ಒಂದು ದಮ್ಮಕ್ಕಾದರೂ ಬಟ್ಟೆಯನ್ನು ತೆಗೆದುಕೊಡಿ' ಎಂದು ಕೇಳಿದ. ಅವನು ಮನೆಗೆ ಬಂದವನೇ ಹೆಂಡತಿಯನ್ನು 'ಹೊಟ್ಟೆತುಂಬಾ ಅನ್ನ ಹಾಕಿದೆಯಾ ಎಂದು ಪ್ರಶ್ನಿ ಸಿದ' ಅವಳು 'ಹಬ್ಬವಾದುದರಿಂದ ಅಯ್ಯೋಪಾಪ ಎಂದು ಬಡಿಸಿದೆ' ನೆಂದಳು. ಕೋಪದಿಂದ ಹೆಂಡತಿಗೆ ಸಾಯಬಡಿದು ಮನೆಯಿಂದ ಹೊರಗೆ ಅಟ್ಟಿದ. ನಂದಿ ಮಿತ್ರ 'ಅವ್ವಾ, ನಿನ್ನನು ಹೊಡೆದದ್ದೇಕೆ? ' ಎಂದು ಕೇಳಿದ. 'ನಿನಗೆ ಹೊಟ್ಟೆ ತುಂಬ ಊಟ ಹಾಕಿದ್ದಕ್ಕೆ" ಎಂದಳು. 'ಇಂತಹ ಪರಮ ನೀಚನ ಮನೆಯಲ್ಲಿ ಮಾರಿ ಇರಲಿ' ಎಂದು ಹೇಳಿ ನಂದಿಮಿತ್ರನೂ ಹೊರಟುಹೋದ. ತಾನೇ ದಿನವೂ ಕಟ್ಟಿಗೆ ಮಾರಿ ಜೀವಿಸತೊಡಗಿದ. ಅವನ ಕೆಟ್ಟ ಅದೃಷ್ಟದಿಂದ ದೊಡ್ಡ ಹೊರೆ ತಂದರೂ ಒಂದು ಹಣವೂ ದೊರಕದೆ ಅಂಬಲಿಗೊ ಎಣ್ಣೆಗೊ ಇಟ್ಟಿಗೊ ಕಟ್ಟಿಗೆ ಹಾಕುತ್ತಾ ಕಾಲ ನೂಕುತ್ತಿದ್ದ.

ಒಮ್ಮೆ ನಂದಿಮಿತ್ರ ಕಟ್ಟಿಗೆ ಹೊರೆ ತರುತ್ತಿದ್ದ. ಜೈನಾಚಾರ್ಯರೊಬ್ಬರು ಆಹಾರಕ್ಕಾಗಿ ನಗರಕ್ಕೆ ಹೋಗುತ್ತಿದ್ದರು. ನಂದಿಮಿತ್ರನೂ ಕುತೂಹಲದಿಂದ ಅವರ ಹಿಂದೆಯೇ ಹೋದ. ಜೈನ ಗುರುಗಳನ್ನು ದೊರೆ ಸ್ವಾಗತಿಸಿದ. ರಾಣಿ ಕಾಲು ತೊಳೆದಳು. ಅವರ ಜತೆಯಲ್ಲೇ ಬಂದ. ಈ ಜೋಳು ತಲೆಯ ನಂದಿಮಿತ್ರನಿಗೂ ರಾಣಿಯೇ ಕಾಲು ತೊಳೆದು ಒಳಗೆ ಕರೆದುಕೊಂಡು ಹೋದರು. ನಂದಿಮಿತ್ರ ಆ ಜೈನ ಆಚಾರ್ಯರ ಶಿಷ್ಯನೆಂದು ತಿಳಿದು ಊಟೋಪಚಾರಗಳನ್ನು ನೀಡಿದರು. ರಾಜಾ ನ್ನದ ಕೂಳು, ಹೆಸರ ತೊವ್ವೆ, ಬೆಣ್ಣೆ ಕಾಸಿದ ಪರಿಮಳ ಬೀರುವ ತುಪ್ಪ, ಹಲವು ತೆರದ ಕಾಯಿಪಲ್ಲೆಗಳು' ಪಾಯಸ, ಪೂರಿ, ಇಡ್ಡಲಿಗೆ ಸೋದಿಗೆ, ಲಾವಣಿಗೆ, ಘೃತಪೂರ' ಲಡ್ಡುಗೆ, ಮಂಡಗೆ, ನಾನಾ ತೆರದ ಪಾನೀಯಗಳು- ಇವನ್ನು ಬಡಿಸಿ ದರು. ಹುಟ್ಟಿದಂದಿನಿಂದ ಕನಸಿನಲ್ಲೂ ಕಂಡು ಅರಿಯದ ದಿವ್ಯಾಹಾರವನ್ನು ಕಂಠ

ಪೂರ್ತಿ ಉಂಡ. ಜೈನಾಚಾರ್ಯರು ಆಹಾರವಾದ ಮೇಲೆ ' ಕರ್ಮಕ್ಷಯವಾಗಲಿ, ದಾನ ಅಕ್ಷಯವಾಗಲಿ ' ಎಂದು ಹರಸಿ ಅಲ್ಲಿಂದ ಹೊರಟು ಊರ ಹೊರಗಿನ ಬ
ದಿಗೆ ಬಂದರು. ನಂದಿಮಿತ್ರನೂ ಅವರ ಹಿಂದೆಯೇ ಬಂದ.

ಮಾರನೆಯ ದಿನ ಮಹಾರಾಣಿ ಹೋಗಿ ಕಿತ್ತಯ್ಯನ ಕಾಲುಗಳಿಗೆ ಎರಗಿ 'ಇಂದು ದಯವಿಟ್ಟು ನಮ್ಮ ಮನೆಯಲ್ಲಿ ಆಹಾರ ಸ್ವೀಕರಿಸಬೇಕು' ಎಂದು ಪ್ರಾರ್ಥಿಸಿ ದಳು. "ಮಹಾದೇವಿಯೇ ನನಗೆ ನಮಸ್ಕರಿಸುತ್ತಿದ್ದಾಳೆ, ಇದೆಲ್ಲ ತಪಸ್ಸಿನ ಫಲ. ಮುಂದೆ ಇನ್ನೂ ದೊಡ್ಡದಾಗಬಹುದು" ಎಂದು ಕಿತ್ತಯ್ಯ ಯೋಚಿಸಿ, 'ಅವ್ವಾ ಇಂದು ನನಗೆ ಉಣ್ಣಲು ಅವಕಾಶವಿಲ್ಲ, ಉಪವಾಸ ಮಾಡುತ್ತಿದ್ದೇನೆ' ಎಂದು ನುಡಿದ. ಮರುದಿನ ಮಹಾಮಂತ್ರಿ ಬಂದು ಬೇಡಿಕೊಂಡ, ಅಂದೂ ಉಪವಾಸ ವೆಂದು ಉತ್ತರ ಬಂತು. ರಾಜಶ್ರೇಷ್ಠಿ ಇನ್ನೊಂದು ದಿನ ಹೋದಾಗಲೂ ಅದೇ ಉತ್ತರ. ಕಿತ್ತಯ್ಯ ರಾತ್ರಿಹಗಲು ಬಿಡದೆ ಪಂಚ ನಮಸ್ಕಾರ ಹೇಳುತ್ತಿದ್ದ. ರಾಜ ಸಭೆಯಲ್ಲಿ ರಾಜರಾಣಿಯರು ಕಿತ್ತಯ್ಯನ ಗುಣವನ್ನೂ ತಪೋಮಹಿಮೆಯನ್ನೂ ಕೊಂಡಾಡಿದರು. ಅಂದು ಯುವರಾಜನು ಬಂದು ಆಹಾರವನ್ನು ತನ್ನ ಮನೆಯಲ್ಲಿ ಸ್ವೀಕರಿಸಲು ಯಾಚಿಸಿದ. "ಇಂತಹ ಕ್ಷತ್ರಿಯ ಪುತ್ರರುಗಳೆಲ್ಲ ನನಗೆ ನಮಸ್ಕಾರ ಮಾಡುತ್ತಿದ್ದಾರೆ, ಊಟಕ್ಕೇನೀಗ ಅಂತಹ ಸಂಕಟ ! ಈ ತಪಸ್ಸಿನ ಫಲವನ್ನು ಇನ್ನೂ ಮುಂದಕ್ಕೆ ನೋಡುತ್ತೇನೆ' ಎಂದು ಭಾವಿಸಿ 'ಇಂದು ಉಪವಾಸ ಕೈಕೊಂಡಿ ದ್ದೇವೆ' ಎಂದು ಯುವರಾಜನಿಗೆ ಉತ್ತರ ಕೊಟ್ಟ.

ಹೀಗೆ ಆರು ದಿನ ಆಹಾರವಿಲ್ಲದೆ ಕಳೆಯಿತು, ಏಳನೆಯ ದಿನ ಕಿತ್ತಯ್ಯ (ನಂದಿಮಿತ್ರನು) ಜೈನಭಟಾರರಿಗೆ ನಮಸ್ಕರಿಸಿ 'ಭಟಾರಾ, ಇಷ್ಟು ಕಾಲವೂ ಉಂಡದ್ದು ಸಾಕು. ಇನ್ನು ನನಗೆ ಬದುಕಿರುವವರೆಗೂ ಯಾವಜ್ಜೀವವೂ ಉಪವಾಸ ದೀಕ್ಷೆ ಕೊಡಬೇಕು' ಎಂದು ವಿಜ್ಞಾಪಿಸಿದ. ಭಟಾರರು ನೀವು ನಿಜವಾಗಿಯೂ ಮಹಾ ಪುರುಷರು. ನಿಮ್ಮಂತಹ ಧೈರ್ಯವಂತರೂ, ಸತ್ಯವಂತರೂ ಇಲ್ಲ ಇಷ್ಟು ಕಾಲ ತಪಸ್ಸುಮಾಡಿರುವ ನಮಗೇ ಇಷ್ಟೊಂದು ಧೈರ್ಯ ಸತ್ವ ಇಲ್ಲ. ಎಂದು ಹೇಳಿ ಆಹಾ ರಕ್ಕೂ ಶರೀರಕ್ಕೂ ನಿವೃತ್ತಿ ದೀಕ್ಷೆ ಕೊಟ್ಟು ಉಪದೇಶವಿತ್ತರು. ಕಿತ್ತಯ್ಯನ ಸುದ್ದಿ ಹಬ್ಬಿತು. ಅರಸನಾದಿಯಾಗಿ ಪಟ್ಟಣದ ಜನರೆಲ್ಲ ಸೇರದರು. ಭಾರೀ ಸಂಭ್ರಮ ದಿಂದ ಅರ್ಚನೆ ಮಾಡಿದರು. ಕಿತ್ತಯ್ಯ ಶುಭ ಪರಿಣಾಮದಿಂದ ಅಂದು ದೇಹತ್ಯಾಗ ಮಾಡಿದ. ಕನಕಧ್ವಜನೆಂಬ ದೇವನಾಗಿ ಹುಟ್ಟಿದ. ಕಿತ್ತಯ್ಯನ ದೇಹತ್ಯಾಗ ವಾರ್ತೆ ಕೇಳಿ ರಾಜಪರಿವಾರ ಪಟ್ಟಣಿಗರು ಎಲ್ಲ ನೆರೆದು ದೇಹವನ್ನು ಪೂಜಿಸಿದರು. ಇದನ್ನು ಕನಕಧ್ವಜದೇವನಾಗಿ ಹುಟ್ಟಿದ ನಂದಿಮಿತ್ರ ಕಿತ್ತಯ್ಯನು ಕಂಡು ' ನನ್ನ ದೇಹಕ್ಕೆ ಇವರು ಇಷ್ಟು ಭಾರಿಯಾಗಿ ಉತ್ಸವ ಮಾಡುತ್ತಿರುವಾಗ ನಾನು ಮಾಡ

ಸಂಸ್ಕೃತಿಯ ಆಳವಾದ ಅಧ್ಯಯನ ನಡೆಸಿ ಅಪೂರ್ವ ಕಾಣಿಕೆ ನೀಡಿದ ಡಾ. ಪಿ. ವಿ. ಕಾಣೆಯವರೊಂದಿಗೆ ಹೋಲಿಸಬಹುದು ಎಂದರು. ಇದಲ್ಲದೆ ಸಂಶೋಧಕನಾಗಿ ಸತ್ಯವನ್ನೇ ಕಾಣುವ ವ್ರತವನ್ನು ಗುರಿಯಾಗಿ ಇಟ್ಟುಕೊಂಡಿದ್ದ ಮಲ್ಲಪ್ಪನವರ ಬರವಣಿಗೆಯನ್ನು "ಸತ್ಯ ನಿಷ್ಠೆಯ ಬರಹ" ಎಂದು ಕರೆದರು.

ಶ್ರೀ ಹೆಚ್. ಎನ್. ರೇಣುಕ ಪ್ರಸಾದ ಅವರು ಮಲ್ಲಪ್ಪನವರು ನಿವೃತ್ತಿಯ ನಂತರ ಘನವೆತ್ತ ಬಾಳನ್ನು ನಡೆಸಿದವರು ಎನ್ನುತ್ತಾ ಅವರ ಮೈಸೂರು ಪೇಟ, ಅಚ್ಚುಕಟ್ಟಾದ ವೇಷಭೂಷಣಗಳನ್ನು ನೆನಪಿಸಿಕೊಂಡು 'ಮಲ್ಲಪ್ಪನವರ ಮರಣ ಹಳೆಯ ಮೈಸೂರಿನ ಸಾಂಸ್ಕೃತಿಕ ವೈಭವದ ನಷ್ಟ' ಎಂದರು. ನ್ಯಾಯ ನಿರ್ವಹಣೆಯ ವಿಕೇಂದ್ರೀಕರಣವನ್ನು ಕುರಿತು ಸಲ್ಲಿಸಿದ 'ಮಲ್ಲಪ್ಪ ಸಮಿತಿ'ಯ ವರದಿ ಪ್ರಜಾಪ್ರಭುತ್ವಕ್ಕೆ ದೊಡ್ಡ ಕೊಡುಗೆ ಎಂಬುದಾಗಿ ಹೇಳಿದರು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಬಸವ ಸಮಿತಿಯ ಅಧ್ಯಕ್ಷರಾದ ಡಾ. ಬಿ. ಡಿ. ಜತ್ತಿ ಅವರು ಬಸವ ಸಮಿತಿಯ ಸ್ಥಾಪನೆಯ ಸಂದರ್ಭದಲ್ಲಿ ಮಲ್ಲಪ್ಪನವರೊಂದಿಗೆ ಉಂಟಾದ ಸಂಪರ್ಕ, ಇದುವರೆಗೆ ಸಮಿತಿಯ ಏಳ್ಗೆಗಾಗಿ ಶ್ರೀಯುತರು ಪರಿತಪಿಸಿದ ಪರಿಯನ್ನು ಬಣ್ಣಿಸಿದರು. ಇದಲ್ಲದೆ, ಸಭೆಯ ಪರವಾಗಿ ಸಂತಾಪ ಸೂಚಕ ನಿರ್ಣಯವನ್ನು ಮಂಡಿಸಿದರು. ಕೊನೆಯಲ್ಲಿ ಮೌನ ಆಚರಣೆಯೊಂದಿಗೆ ಸಭೆ ಮುಕ್ತಾಯವಾಯಿತು.

## ಸಂತಾಪ ಸೂಚಕ ನಿರ್ಣಯ

ಮೈಸೂರಿನ ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿಗಳೂ, ನಾಡಿನ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರೂ, ವೀರಶೈವ ಸಮಾಜದ ಧೀಮಂತ ಧುರೀಣರಲ್ಲಿ ಒಬ್ಬರೂ, ಪಂಚಾಚಾರ ಪರಾಯಣರೂ, ಅಷ್ಟಾವರಣ ಗರಿಷ್ಠರೂ' ಷಟ್‌ಸ್ಥಳ ಸಾಧಕರೂ, ದಾನಿಗಳೂ ದಯಾಳುಗಳೂ ಆಗಿದ್ದ ವೇದವೇದಾಂತ ವಿದ್ಯಾವಾಚಸ್ಪತಿ ಸನ್ಮಾನ್ಯ ಶ್ರೀ ಟಿ. ಎಸ್. ಮಲ್ಲಪ್ಪನವರು ದಿನಾಂಕ 16-12-1980 ಕ್ಕೆ ಶಿವೈಕ್ಯರಾದುದಕ್ಕಾಗಿ ಈ ಸಭೆಯು ತನ್ನ ಅತೀವವಾದ ಸಂತಾಪವನ್ನು ಸೂಚಿಸುತ್ತದೆ. ಮಾನ್ಯರು ತಮ್ಮ ತುಂಬು ಜೀವನದಲ್ಲಿ ಅತ್ಯಂತ ದಕ್ಷರಾದ, ಪ್ರಾಮಾಣಿಕರಾದ, ವಿವೇಕಿಗಳಾದ ನ್ಯಾಯಮೂರ್ತಿಗಳೆನಿಸಿಕೊಂಡುದಲ್ಲದೆ ತಮ್ಮ ಸುದೀರ್ಘವಾದ ವಿಶ್ರಾಂತ ಜೀವನವನ್ನು ಭಾರತೀಯ ದರ್ಶನಗಳ ತುಲನಾತ್ಮಕ ಅಧ್ಯಯನಕ್ಕೆ ಮೀಸಲಾಗಿರಿಸಿ. ವೇದಾಗಮೋಪನಿಷತ್ತುಗಳ, ಭಗವದ್ಗೀತೆ, ಸಿದ್ಧಾಂತ ಶಿಖಾಮಣಿ, ವಚನ ವಾಙ್ಮಯ ಶ್ರೀಕಂಠ ಭಾಷ್ಯ ಇತ್ಯಾದಿಗಳ ಬಗ್ಗೆ ಉದ್‌ಗ್ರಂಥಗಳನ್ನು ಬರೆದು ಭಾರತೀಯ ದರ್ಶನ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಅವರು ವೀರ

ಶೈವದ ಉಗಮ ಮತ್ತು ವಿಕಾಸ' 'ವಚನೋಪನಿಷತ್' ಮುಂತಾದ ಗ್ರಂಥಗಳಂತೂ ಬಹುಕಾಲದ ಸಂದರ್ಭ ಗ್ರಂಥಗಳಾಗಿ ಉಳಿಯ ಬಲ್ಲುವಾಗಿವೆ. ಇತಿಹಾಸ ಸಂಶೋಧನೆಯಲ್ಲಿಯೂ ಸನ್ಮಾನ್ಯರು ಮರೆಯಲಾಗದ ಮಹತಾರ್ಯವನ್ನು ಮಾಡಿ ತಮ್ಮ ಬಹುಮುಖ ಪಾಂಡಿತ್ಯಕ್ಕೆ ನಿದರ್ಶನವನ್ನು ನೀಡಿದ್ದಾರೆ. ಆಳವಾದ ಪಾಂಡಿತ್ಯ, ಸಾರಗ್ರಾಹ್ಯ ದೃಷ್ಟಿ ವೈಚಾರಿಕ ವಿವೇಚನೆ ವಸ್ತುನಿಷ್ಠೆ ನಿರೂಪಣೆಗಳು ಅವರ ಕೃತಿಗಳ ವೈಶಿಷ್ಟ್ಯವೆನ್ನಬಹುದಾಗಿದೆ. ತಮ್ಮ ಜೀವನದ ಕೊನೆಯ ಉಸಿರಿನವರೆಗೂ ಅವರು ಈ ಪವಿತ್ರ ವಾಙ್ಮಯ ತಪಸ್ಸನ್ನು ನಡೆಸಿದುದು ಅವರ ಅಪಾರವಾದ ಜ್ಞಾನಪ್ರೇಮದ ಪ್ರತೀಕವಾಗಿದೆ.

''ಬಸವ ಸಮಿತಿ' ಯ ಪ್ರಾರಂಭದಿಂದಲೂ ಅದರ ಪ್ರಬಲ ಸಮರ್ಥಕರೂ ಸಹಾಯಕರೂ ಆಗಿದ್ದ ಅವರು 'ಬಸವ ಜರ್ನಲ್' ಗಳ ಸಂಪಾದಕ ಸಮಿತಿಯ ಸದಸ್ಯರಾಗಿ, ಬಸವ ಸಮಿತಿಯ ಕಾರ್ಯ, ಸಮಿತಿಯ ಹಾಗೂ ಟ್ರಸ್ಟಿನ ಸದಸ್ಯರಾಗಿ ಚಿರಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದುದಲ್ಲದೆ ಸಮಿತಿಗೆ ದತ್ತಿಯನ್ನೂ ನೀಡಿ ಅನುಕರಣೀಯರಾಗಿದ್ದಾರೆ. ದಿನಾಂಕ ೨೩-೧೨-೮೦ ರಂದು ಸೇರಿದ ಈ ಸಭೆ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೊಡುತ್ತದೆ ಹಾಗೂ ಅವರ ಕುಟುಂಬ ವರ್ಗಕ್ಕೆ ತನ್ನ ಹಾರ್ದಿಕ ಸಹಾನುಭೂತಿಯನ್ನು ಸೂಚಿಸುತ್ತದೆ. ಈ ಗೊತ್ತುವಳಿಯ ಪ್ರತಿಯನ್ನು ಅವರ ಕುಟುಂಬ ವರ್ಗಕ್ಕೆ ಕಳುಸುವಂತೆ ಈ ಸಭೆಯು ಅಧ್ಯಕ್ಷರನ್ನು ಕೋರುತ್ತದೆ.

---

# ಕಾಯ ಸಿದ್ಧಿಯ ಉಪಾಯ

ನ. ಮುನಿಸ್ವಾಮಿ

ದೇಹವು ಅಳಿದರೆ ಜೀವನೂ ಅಳಿವನು
ಸ್ಥಿರದಿ ಸತ್ಯಶಿವ ಸುಂದರನು ನೆಲೆಸಿರಲಾರನು
ದೇಹವನು ಸಲಹುವ ಉಪಾಯವನು ಅರಿತೇ
ದೇಹವನು ಸಲಹಿದೆ; ಜೀವನನು ಸಲಹಿದೆನಯ್ಯಾ !

ದೇಹವನು ಮುನ್ನ ತುಚ್ಛವೆಂದೆಣಿಸಿರ್ದೆ
ದೇಹದೊಳಗೆ ದಿವ್ಯಾರ್ಥವನು ಕಂಡೇ
ದೇಹದೊಳಗೆ ದೇವನು ನೆಲೆಸಿಹನೆಂದು
ದೇಹವನು ನಾನಿದ್ದು ಸಲಹುತಿಹೆನಯ್ಯಾ !

('ತಿರುಮಂದಿರಂ, ತಮಿಳು ಶೈವಕೃತಿಯ ಪದ್ಯಾನುವಾದ').

ತಿಪಟೂರಿನಲ್ಲಿ ಡಿಸೆಂಬರ್ **27,28-1980** ರಂದು ನಡೆದ ತುಮಕೂರು ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಶ್ರೀಗಳವರು ಮಾಡಿದ

# ಉದ್ಘಾಟನಾ ಭಾಷಣ

—ಕೆ. ಬಸವರಾಜು

**ಸಮ್ಮೇಳನಾಧ್ಯಕ್ಷರೆ, ವ್ಯವಸ್ಥಾಪಕ ವರ್ಗದವರೆ, ಸಾಹಿತ್ಯಾಭಿಮಾನಿಗಳೇ ಮತ್ತು ತಾಯಂದಿರೆ,**

ತುಮಕೂರು ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನವು ಕಲ್ಪತರುವಿನ ಬೀಡಾದ ಈ ತಿಪಟೂರಿನಲ್ಲಿ ನಡೆಯುತ್ತಿರುವುದು ಹರ್ಷಪ್ರದ ಸಂಗತಿಯಾಗಿದೆ. ಕರ್ನಾಟಕದಲ್ಲಿ ತುಮಕೂರು ಜಿಲ್ಲೆ ತನ್ನದೇ ಆದ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದೆ. ಈ ಜಿಲ್ಲೆಯಲ್ಲಿ ಎಲ್ಲ ಜೀವಂತ ಅಂಗಗಳ ವಿಕಾಸವಾಗಿದೆ. ಮತ್ತು ತಮ್ಮ ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಿವೆ. ಸಾಹಿತ್ಯ ಕ್ಷೇತ್ರದಲ್ಲಿ ಈ ಜಿಲ್ಲೆ ಗಣ್ಯಸ್ಥಾನವನ್ನು ಗಳಿಸಿಕೊಂಡಿದೆ. ಉಜ್ವಲ ಪರಂಪರೆಯನ್ನು ಹೊಂದಿದೆ. ಗೂಳೂರು ಸಿದ್ದವೀರಣ್ಣಾರ್ಯ, ಅಮರಗೊಂಡದ (ಗುಬ್ಬಿ) ಮಲ್ಲಣಾರ್ಯ, ಮತಕೂರಿನ (ಮೈದಾಳ) ನಂಜುಂಡ ಶಿವಯೋಗಿಗಳು ಮುಂತಾದ ಅನೇಕ ದಾರ್ಶನಿಕರು ಇಲ್ಲಿ ಸಂದು ಹೋಗಿದ್ದಾರೆ. ಬೆಳ್ಳಾವಿ ನರಹರ ಶಾಸ್ತ್ರಿ, ವೆಂಕಟನಾರಾಯಣಪ್ಪ, ತೀ. ನಂ. ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳು ಮೊದಲಾದ ವಿದ್ವನ್ಮಣಿಗಳು ಅಮೂಲ್ಯವಾದ ಸಾಹಿತ್ಯ ಸೇವೆಯನ್ನು ಸಲ್ಲಿಸಿ ಕೀರ್ತಿಶೇಷರಾಗಿದ್ದಾರೆ. ಈಗಲೂ ಇನ್ನೂ ಅನೇಕ ಸಾಹಿತಿಗಳು, ಕವಿಗಳು ಕಲಾವಿದರು ಕಂಗೊಳಿಸುತ್ತಿದ್ದಾರೆ. ಕಲಾಕ್ಷೇತ್ರದಲ್ಲಿಯಂತೂ ಗುಬ್ಬಿ ವೀರಣ್ಣನವರ ಹೆಸರು ಚಿರಸ್ಮರಣೀಯ. 'ಕರ್ನಾಟಕಾಂಧ್ರ' ನಾಡುಗಳಲ್ಲಿ ತಮ್ಮ ಅಮೋಘ ಕಲೆಯನ್ನು ಮೆರೆದ ಪುಣ್ಯಾತ್ಮರು ರಾಜಕೀಯ ಕ್ಷೇತ್ರದಲ್ಲಿಯೂ ತುಮಕೂರು ಜಿಲ್ಲೆ ಮಹತ್ತರವಾದ ಸ್ಥಾನವನ್ನು ಗಳಿಸಿದೆ ಅನೇಕ ಮುಖಂಡರು ದೇಶಕ್ಕಾಗಿ ತಮ್ಮ ಬದುಕನ್ನೇ ಬಲಿದಾನಗೈದು ಹುತಾತ್ಮರಾಗಿದ್ದಾರೆ. ಈ ಜಿಲ್ಲೆಯಲ್ಲಿ ಅನೇಕ ಪುಣ್ಯ ಕ್ಷೇತ್ರಗಳಿವೆ, ಅನೇಕ ಸಾಧು ಸಂತರು ಸಂದು ಹೋಗಿದ್ದಾರೆ. ಅವರು ಆಧ್ಯಾತ್ಮ ಸಂಪತನ್ನು ನಮಗೆ ಬಿಟ್ಟು ಹೋಗಿದ್ದಾರೆ. ಅದರ ಸವಿಯನ್ನು ಇಡೀ ಭರತಖಂಡವೇ ಉಣ್ಣುತ್ತಿದೆ. ಹೀಗೆ ತುಮಕೂರು ಜಿಲ್ಲೆ ಸಾಂಸ್ಕೃತಿಕ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣ ಜಿಲ್ಲೆಯಾಗಿದೆ.

ಭರತಖಂಡ ಇಡೀ ಜಗತ್ತಿನಲ್ಲಿಯೇ ಉತ್ತಮ ಸ್ಥಾನವನ್ನು ಪಡೆದಿರುವುದು ಅಭಿಮಾನಾಸ್ಪದವಾಗಿದೆ ಜಗತ್ತಿನ ಆಗು ಹೋಗುಗಳನ್ನು ರೂಪಿಸುವುದರಲ್ಲಿ ನಮ್ಮ ದೇಶ ಅನುಪಮ ಪಾತ್ರವಹಿಸಿದೆ. "ಜಗತ್ತಿನ ಉದ್ಧಾರ ಭರತಖಂಡವನ್ನವಲಂಬಿಸಿದೆ." ಒಲ್ಲವರ ಮಾತ್ತು. ಲಾರ್ಡ್ ಕರ್ಜನ್ ಭರತಖಂಡದ ಬಗ್ಗೆ ಒಂದುಮಾತು ಹೇಳಿ ಹೋಗಿದ್ದಾನೆ, ಅದು ಚಿರಸ್ಮರಣೀಯವಾಗಿದೆ. "ಜಗತ್ತಿನ ಅನೇಕ ರಾಷ್ಟ್ರ

ಗಳು ಅಂಧಕಾರದಲ್ಲಿ ಮುಳುಗಿದ್ದಾಗ, ಕಾಡು ಜನಾಂಗವಾಗಿರುವಾಗ ಭರತಖಂಡದ
ವರು ಸುಸಂಸ್ಕೃತರಾಗಿ, ನಾಗರೀಕರಾಗಿ ಬಾಳ್ವೆ ಮಾಡುತ್ತಿದ್ದರು.' ಹೀಗೆ ಭಾರ
ಯರು ತಮಗೆ ಮಾತ್ರವಲ್ಲ, ಇಡೀ ಜಗತ್ತಿಗೆ ಒಂದು ಅದ್ಭುತ ಜ್ಯೋತಿಯನ್ನು
ಹಚ್ಚಿಟ್ಟು ಹೋಗಿದ್ದಾರೆ. ಅವರ ಪ್ರಭೆಯಲ್ಲಿ ಜೀವನ ನಡೆಸುವ ವಿಚಾರ ಬುದ್ಧಿ
ಬೆಳೆಯಬೇಕಾಗಿದೆ, ನಮ್ಮ ತರುಣರಲ್ಲಿ. ಹೀಗೆ ವಿಶ್ವದಲ್ಲಿ ಭರತಖಂಡಕ್ಕೆ ದಕ್ಕಿ
ರುವ ಕೀರ್ತಿಯಲ್ಲಿ ಕರ್ನಾಟಕದ್ದು ಸಿಂಹಪಾಲೆಸಿದೆ.

ಮತ್ತೊಂದು ಮುಖ್ಯವಾದ ವಿಚಾರದ ಕಡೆ ನಮ್ಮ ಗಮನ ಹರಿಯಬೇಕಾ
ಗಿದೆ. ಇದು ಸಮಸ್ಯೆಯ ಯುಗ ಇಂದು ಒಂದಲ್ಲ, ಹತ್ತಲ್ಲ, ಹಲವಾರು ನಮ್ಮನ್ನು
ಕಾಡುತ್ತಿವೆ. ಈ ಸಮಸ್ಯೆಗಳ ಪರಿಹಾರದ ಹೊಣೆ ಹೊರುವವರು ಯಾರು ? ಇದ
ಪೂರ್ಣಹೊಣೆ ನಾಯಕರಿಗೆ ಅಥವಾ ಸರ್ಕಾರಕ್ಕೆ ಸೇರಿದ್ದು ಎಂಬ ಕಲ್ಪನೆಯ ಮನೋ
ಭಾವನೆಯುಳ್ಳವರಾಗಿದ್ದೇವೆ. ಕೆಲವು ದಿನಗಳ ಹಿಂದೆ ತುಮಕೂರು ಹೆಚ್. ಎಂ. ಟಿ
ಕಾರ್ಖಾನೆಗೆ ಬಂದಿದ್ದ ಕೆಲವು ಜಪಾನಿಯರು ಶ್ರೀ ಕ್ಷೇತ್ರಕ್ಕೆ ಬಂದಿದ್ದರು
ಮಾತನಾಡುವಾಗ ಅವರು ಪ್ರಶ್ನೆ ಮಾಡಿದರು- ನಿಮ್ಮಲ್ಲಿ ಯಾವ ಕೊರತೆಯಿದೆ
ಸಾಕಷ್ಟು ಸಾಂಸ್ಕೃತಿಕ ಸಂಪತ್ತಿದೆ, ಪ್ರಾಕೃತಿಕ ಸಂಪತ್ತಿದೆ, ಕರಾವಳಿ ಸಂಪತ್ತಿದೆ
ಜಲ ಸಂಪತ್ತಿದೆ, ಜನಸಂಪತ್ತಿದೆ, ಎಲ್ಲವೂ ಇದೆ. ಇಷ್ಟೆಲ್ಲ ಇದ್ದರೂ ಬಡತನ, ಬ
ತನ ಎಂದು ಹೇಳುತ್ತಿದ್ದೀರಿ! ಆದರೆ ನಿಮ್ಮಲ್ಲಿ ಮೂರು ಕೊರತೆ ಎದ್ದುಕಾಣ
ತ್ತಿದೆ. ಅವು ಯಾವುವೆಂದರೆ- ರಾಷ್ಟ್ರಪ್ರೇಮ, ಆತ್ಮೀಯ ಭಾವನೆ, ಮತ್ತು ಕರ
ವ್ಯನಿಷ್ಠೆ. ಈ ಮೂರರ ಅಭಾವವೇ ನಿಮ್ಮ ಬಡತನಕ್ಕೆ ಕಾರಣ. ನಮ್ಮಲ್ಲಿಯ
ದರೂ ಉಳಿದ ಯಾವ ಸಂಪತ್ತು ಹೆಚ್ಚಿಲ್ಲದಿದ್ದರೂ ಈ ಮೂರು ಸಂಪತ್ತುಗಳ
ಮಾತ್ರ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಇವೆ. "ಇದೇ ನಮ್ಮ ಶೀಘ್ರಪ್ರಗತಿ
ಕಾರಣ" ನಿಜಕ್ಕೂ ನಾವು ಅವರ ಮಾತನ್ನು ಮೆಚ್ಚಬೇಕು, ಮತ್ತು ಅರ್ಥಮಾ
ಕೊಳ್ಳಬೇಕು.

ಇಂದು ನಮಗೆ ಬೇಕಾಗಿರುವುದು, ನೈತಿಕ ಸಂಪತ್ತು ಮತ್ತು ಉತ್ತಮ
ಜನಾಂಗ ನಿರ್ಮಾಣದ ಯೋಜನೆಗಳು ಮಾತ್ರ. ಉತ್ಕೃಷ್ಟ ಭಾವನಾ ವಿಕಾ
ದಿಂದ ಜನರನ್ನು ನೀತಿವಂತರನ್ನಾಗಿಸಿ, ಉದ್ಧಾರ ಮಾಡುವಂಥ ಸಾಹಿತ್ಯ ನಮಗಿಂದು
ಬೇಕಾಗಿದೆ. ಇಲ್ಲಿ ವಿಚಾರವಂತರು, ಮೇಧಾವಿಗಳು, ಬುದ್ಧಿಜೀವಿಗಳು, ಸಾಹಿ
ಗಳು, ಕವಿಗಳು, ಮುಂತಾಗಿ ಎಲ್ಲರೂ ಸಮಾವೇಶಗೊಂಡಿದ್ದೀರಿ ಆದ್ದರಿಂ
ಅಂತಹ ಸಾಹಿತ್ಯ ನಿರ್ಮಾಣಕ್ಕೆ ನೀವೇ ಅಧಿಕಾರಿಗಳು. ಆ ರೀತಿಯಾದ, ಜನತೆ
ಭಾವನೆಯನ್ನು ವಿಕಾಸಗೊಳಿಸುವಂಥ, ಜಾಗೃತಿಯನ್ನುಂಟು ಮಾಡುವಂತಹ ಸಾಹಿ
ನಿಮ್ಮಿಂದ ಸೃಷ್ಟಿಯಾಗಲಿ. ದೇವ ದೇವನು ಆ ಶಕ್ತಿಯನ್ನು ಮತ್ತು ಸನ್ಮಂಗ
ವನ್ನು ಎಲ್ಲರಿಗೂ ಉಂಟು ಮಾಡಲಿ ಎಂದು ಪ್ರಾರ್ಥಿಸಿ ವಿರಮಿಸುತ್ತೇನೆ.

ದಲ್ಲಿ ಸಾಮಾನ್ಯ ವಿಷಯ. ಮಲನಿವೃತ್ತಿಯಿಂದ ಮೋಕ್ಷ ಪ್ರಾಪ್ತಿಯೆಂಬುದು ಈ ಮತದ ಗುರಿ. ಇದರಿಂದ ಇದಕ್ಕೆ ಪಾಶುಪತ ವ್ರತವೆಂದು ಹೆಸರಾಯಿತು.

**ಸ್ಪಂದಶಾಸ್ತ್ರ** : ಪರಿಪೂರ್ಣನಾದ ಶಿವನು ಪರಿಮಿತವಾದ ವಿಶ್ವವನ್ನು ಪ್ರಕಾಶ ಪಡಿಸಬೇಕಾದರೆ ತನ್ನ ಮೊದಲನೆಯ ಸ್ಥಿತಿಯಿಂದ ಶಕ್ತಿಗಳನ್ನು ಪ್ರಸರಿಸ ಬೇಕು. ಹೀಗೆ ಪ್ರಸರಿಸುವುದರಲ್ಲಿ ಮೊದಲನೆಯ ಸ್ಫುರಣವೇ ಸ್ಪಂದ. ಸ್ಪಂದ, ಕಂಪನ, ಚಲನ, ಸ್ಫುರತ್ತಾ, ಉನ್ಮೇಷ ಇವೆಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತವೆ. ಮೂಲದಲ್ಲಿ ವಿಕಾರವಿಲ್ಲದ ಶಕ್ತಿಯು ವಿಲಾಸವನ್ನು ತೋರ್ಪಡಿಸುವಿಕೆಯೇ ಸ್ಪಂದ. ವಿಶ್ವದ ಭೇದಗಳು ಅನಂತವಾಗಿದ್ದು ಸ್ಪಂದ ಶಕ್ತಿಯ ಮಹಿಮೆಯಿಂದ ಪ್ರತಿಯೊಂದು ಪದಾರ್ಥವು ಭಿನ್ನ ಭಿನ್ನವಾಗಿ ಗುಣ, ಕ್ರಿಯೆ, ಆಕಾರ, ವ್ಯವಹಾರ ಪರಿಣಾಮ ಇವುಗಳಿಂದ ಬೇರೆ ಬೇರೆಯಾಗಿ ತೋರುತ್ತಿರುತ್ತವೆ. ಪದಾರ್ಥಗಳ ತಾರತಮ್ಯವು ಸ್ಪಂದದ ಮಿತಿಯಿಂದಲೇ ರೂಪುಗೊಂಡಿದೆ. ಸ್ಪಂದದ ದೃಷ್ಟಿಯಿಂದ ಪ್ರತಿಯೊಂದು ವ್ಯಕ್ತಿಯನ್ನೂ ಸ್ಪಂದದ ಮಿತಿಯಿಂದ ಪ್ರತಿಯೊಂದು ಪದಾರ್ಥವನ್ನೂ ಅರಿಯುವುದರಿಂದ ಐಕ್ಯ ಮತ್ತು ಭಿನ್ನತೆಗಳು ಒಂದರಲ್ಲೇ ಅಡಗಿರುತ್ತವೆಂಬುದೂ ವಿಶ್ವದ ವ್ಯವಹಾರಗಳೆಲ್ಲಾ ಸ್ಪಂದದ ತಾರತಮ್ಯಗಳಿಂದ ನಡೆಯುತ್ತಿರುತ್ತವೆಂಬುದೂ ಗೋಚರವಾಗುತ್ತದೆ. ಈ ವಿಧವಾದ ತಿಳಿವಳಿಕೆಯಿಂದ ತನ್ನ ಪರಿಮಿತಿ, ತನ್ನ ಯೋಗ್ಯತೆ, ತನ್ನ ಶಕ್ತಿ, ತನ್ನ ಅರಿವು ಚೆನ್ನಾಗಿ ಗೊತ್ತಾಗುತ್ತದೆ. ಸತ್ವ ರಜಸ್ತಮಸ್ಸುಗಳ ಪ್ರಭಾವವು ಚಿತ್ ಸ್ಪಂದದಿಂದಲೇ ಹೊರಟಿರುವುದಾದರೂ ಎಷ್ಟೇ ವಿಕಾರಗಳನ್ನು ಹೊಂದಿದ್ದರೂ ವಿಶ್ವವು ಶಿವಾಭಿನ್ನವಾಗಿದೆಯೆಂದೂ ವಿಶ್ವದ ವ್ಯವಹಾರವೆಲ್ಲಾ ಸ್ಪಂದದ ಚಮತ್ಕಾರವೆಂದೂ ಪರಿಪೂರ್ಣನಾದ ಶಿವನಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ತಿಳಿದು ಸ್ಪಂದ ತತ್ವದ ಸ್ವರೂಪವನ್ನು ಅನುಸಂಧಾನ ಮಾಡುವವನಿಗೆ ಸ್ವರೂಪ ವಿಕಾಸವೇರ್ಪಡುತ್ತದೆ. ಸುಖ, ದುಃಖ ಗ್ರಾಹ್ಯ ಗ್ರಾಹಕ ಭಾವ ಮೌಢ್ಯ ಇವುಗಳಿಲ್ಲದಿರುವ ಸ್ಥಿತಿಯೆ ಇದು ಎಲ್ಲರ ಅನುಭವದಲ್ಲಿರುವ ವಿಷಯ. ಒಬ್ಬ ಮಿತ್ರನನ್ನು ನೋಡಿ ಬಹಳ ದಿವಸಗಳಾಗಿದ್ದರೆ ಅವನು ಎದುರಿಗೆ ಬಂದಾಗ ಒಡನೆಯೇ ಗುರುತಿಸುವುದಕ್ಕಾಗದಿದ್ದರೂ ಅವನ ರೂಪು, ಕಂಠಧ್ವನಿ, ಮಾತಿನಶೈಲಿ, ಮುಂತಾದವುಗಳಿಂದ ಅನುಮಾನಿಸಿ 'ಓಹೋ ! ನೀವು ಇಂಥಾವರಲ್ಲವೇ ! ನನಗೇ ಗುರುತೇ ಸಿಕ್ಕಲಿಲ್ಲವಲ್ಲ' ಅಂತ ಸಂಕೋಚಪಡುವುದು ಬಳಕೆಯಲ್ಲಿದೆ. ಶಾಸ್ತ್ರಜ್ಞರು 'ವ್ಯಾಧಕುಮಾರನ್ಯಾಯ'ವನ್ನು ಈ ಪ್ರತ್ಯಭಿಜ್ಞೆಗೆ ದೃಷ್ಟಾಂತವಾಗಿ ಉಪಯೋಗಿಸುತ್ತಾರೆ. ಒಬ್ಬ ರಾಜನು ತನ್ನ ಚಿಕ್ಕ ಮಗನೊಡನೆ ಬೇಟೆಗೆ ಹೋಗಿದ್ದನು. ಬೇಟೆಯಲ್ಲಿ ಮೃಗಗಳನ್ನಟ್ಟಿಕೊಂಡು ಬಹುದೂರ ಹೋದಾಗ ಆ ಮಗು ಆಟವಾಡುವುದಕ್ಕೆ ಹೋಗಿದ್ದು ತಪ್ಪಿಸಿಕೊಂಡನು. ರಾಜನು ಹುಡುಕಿ ಹುಡುಕಿ ಬೇಸತ್ತು ಮಗನನ್ನು ಕಾಣದೆ ಎಲ್ಲೋ ಕಾಡುಮೃಗಗಳಿಗೆ ತುತ್ತಾಗಿರಬಹುದೆಂದು ತಿಳಿದು ಮನೆಗೆ ಸೇರಿದನು. ಆ ಮಗು

ವನ್ನು ಅಲ್ಲಿನ ಬೇಡರು ಅಕ್ಕರೆಯಿಂದ ಸಾಕಿದರು. ಅವನು ಯೌವನವಂತನಾದನು. ಹತ್ತಾರು ವರ್ಷಗಳು ಕಳೆದನಂತರ ಅದೇ ಕಾಡಿಗೆ ಆ ಮಗುವನ್ನು ನೋಡಿದ ಸರದಾರನೊಬ್ಬನು ಬೇಟೆಗೆ ಬಂದನು. ಬೇಡರ ಮಧ್ಯೆ ಇದ್ದ ಆ ಹುಡುಗನನ್ನು ನೋಡಿ ಇವನ ರೂಪುಲಾವಣ್ಯಗಳಿಂದ ಇವನು ಬೇಡರ ಮನೆತನದಲ್ಲಿ ಹುಟ್ಟಿದವನಲ್ಲವೆಂದು ಊಹಿಸಿ ಹಿಂದೆ ರಾಜನೊಡನೆ ಬಂದಾಗ ಕಳೆದುಕೊಂಡಿದ್ದ ಮಗುವೇ ಇವನಿರಬಹುದೆಂದು ನಿಶ್ಚಯಿಸಿಕೊಂಡು ಯುಕ್ತಿಯಿಂದ ಆ ಹುಡುಗನನ್ನು ತನ್ನಲ್ಲಿಗೆ ಬರಮಾಡಿಕೊಂಡು ಇದುವರೆಗೂ ಬೇಡರ ಮಗನೆಂದೇ ತಿಳಿದಿದ್ದ ಆ ಹುಡುಗನಿಗೆ ನೀನು ಬೇಡರ ಮಗನಲ್ಲ ನೀನು ರಾಜನ ಮಗನು' ಎಂದು ಹಿಂದಿನ ಕಥೆಯನ್ನು ತಿಳಿಸಲಾಗಿ, ತಾನು ರಾಜನ ಮಗನೆಂದು ತಿಳಿದು ಕಾಡಿನಿಂದ ಪಟ್ಟಣಕ್ಕೆ ಹೋಗಿ ರಾಜನಾದನು. ಇದು ಅನುಮಾನಪ್ರಧಾನವಾದ ಪ್ರತ್ಯಭಿಜ್ಞೆ. ಸರದಾರನು ಇವನ ರೂಪುಲಾವಣ್ಯಗಳನ್ನೂ ಚಲನವಲನಗಳನ್ನೂ ನೋಡಿ ಇವನು ಬೇಡರ ಹುಡುಗನಲ್ಲವೆಂದು ತಾನು ನಿಶ್ಚಯಿಸಿಕೊಂಡನು. ಅವನ ನಿಶ್ಚಯಕ್ಕೆ ಇಲ್ಲಿ ಅನುಮಾನವೇ ಮುಖ್ಯ. ರಾಜಕುಮಾರನು ತನ್ನನ್ನು ತಾನು ಇಂಥವನೇ ಎಂದು ತಿಳಿದುಕೊಂಡದ್ದು ಸರದಾರನ ಮಾತಿನಿಂದ. ಇದು ಶಬ್ದ ಪ್ರಮಾಣ, ಹೀಗೆ ''ಪ್ರತ್ಯಕ್ಷ' ''ಅನುಮಾನ'' ಶಬ್ದ ಇವು ಮೂರು ಪ್ರತ್ಯೇಕವಾದ ಘಟನೆಗಳಲ್ಲಿ ಪ್ರಧಾನವಾಗಿದ್ದು ಪ್ರತ್ಯಭಿಜ್ಞೆಯನ್ನುಂಟು ಮಾಡುತ್ತವೆ. ಮನೆಯನ್ನು ಬಿಟ್ಟು ಹೊರಕ್ಕೆ ಹೋದವನು ಮನೆಯನ್ನು ಸೇರುವ ಪ್ರಸಂಗದಲ್ಲಿ ಪ್ರತ್ಯಕ್ಷ ಪ್ರಮಾಣವು ಪ್ರಧಾನವಾಗಿರುತ್ತದೆ. ಸರದಾರನು ರಾಜಕುಮಾರನನ್ನು ಗುರುತಿಸಿದ್ದು ಅನುಮಾನದಿಂದ. ಅನುಮಾನ ಪ್ರಮಾಣವೇ ಇಲ್ಲಿ ಪ್ರಧಾನವಾದದ್ದು. ರಾಜಕುಮಾರನು ತನ್ನನ್ನು ತಿಳಿದ ಪ್ರಸಂಗದಲ್ಲಿ 'ಶಬ್ದ" ಪ್ರಮಾಣವೇ ಮುಖ್ಯ. ನಮ್ಮ ತಿಳಿವಳಿಕೆಯಲ್ಲಿ ಪ್ರಮಾಣಗಳು ಒಂದರೊಡನೆ ಒಂದು ಸೇರಿಕೊಂಡಿದ್ದರೂ ಯಾವ ಪ್ರಮಾಣವು ಮುಖ್ಯವಾಗಿರುತ್ತದೆಯೋ ಅದನ್ನು ಪ್ರಧಾನವಾಗಿ ವ್ಯವಹರಿಸುತ್ತೇವೆ.

ಇದುವರೆಗೂ ಲೌಕಿಕ ದೃಷ್ಟಾಂತಗಳಿಂದ ಪ್ರತ್ಯಭಿಜ್ಞೆ ಎಂಬುದರ ಅರ್ಥವನ್ನು ಸ್ಥೂಲವಾಗಿ ವಿವರಿಸಿದ್ದಾಯಿತು. ಇನ್ನು ತಾತ್ವಿಕ ದೃಷಿಯಿಂದ 'ಆ ಶಿವನೇ ನಾನು' ಎಂಬುದನ್ನು ಪ್ರತ್ಯಭಿಜ್ಞಾ ಶಾಸ್ತ್ರವು ಹೇಗೆ ನಿರ್ಣಯಿಸುತ್ತದೆಂಬುದನ್ನು ತಿಳಿಯಬಹುದು. ಈ ತತ್ವಶಾಸ್ತ್ರದ ಪ್ರಕಾರ ವಿಶ್ವಕ್ಕೆ ಮೂಲಕಾರಣ ಶಿವನು. ಆತನೊಬ್ಬನು ಸ್ವತಂತ್ರನು, ಸರ್ವಶಕ್ತನು ಮತ್ತು ಅನಂತ ಶಕ್ತಿಗಳನ್ನೊಳಗೊಂಡಿರುವವನು. ಭೇದ ಜ್ಞಾನಕ್ಕೆ ಕಾರಣವಾಗಿರುವ ಈ ಪ್ರಪಂಚವೆಲ್ಲಾ ಆತನ ಸ್ವಾತಂತ್ರ್ಯ ಶಕ್ತಿಯ ವಿಲಾಸ. ಈ ಪ್ರಪಂಚ ಜಡಚೇತನ ರೂಪವಾಗಿರಲಿ ಚರಾಚರವಾಗಿರಲಿ ಗ್ರಾಹ್ಯ ಗ್ರಾಹಕ ರೂಪವಾಗಿರಲಿ ಹೇಗೆ ಇರಲಿ ಇದು ಶಿವನಿಂದ ಬೇರೆಯಲ್ಲ, ಆ ಶಿವನು ತನ್ನ ಲೀಲೆಯಿಂದ ಗ್ರಾಹ್ಯ ಗ್ರಾಹಕ ಭಾವದಿಂದಿರುವ ಈ ವಿಶ್ವವನ್ನು ತನ್ನ

ಲ್ಲಿಯೇ ಪ್ರಕಾಶ ಪಡಿಸುತ್ತಾನೆ. ಈ ಪ್ರಕಾಶವು ಸೃಷ್ಟಿ, ಸ್ಥಿತಿ, ಸಂಹಾರ ತಿರೋಧಾನ ಅನುಗ್ರಹಗಳೆಂಬ ಪಂಚ ಕೃತ್ಯಗಳ ಏರಿಳಿತಗಳಿಂದ ನಡೆಸಲ್ಪಡುತ್ತಿದೆ. ಹಾಗೆಯೇ ಆ ಪರಮ ಶಿವನು ಸತ್, ಚಿತ್, ಆನಂದ ಇಚ್ಛಾಜ್ಞಾನ ಕ್ರಿಯಾಶಕ್ತಿಗಳಿಂದ ಪರಿಪೂರ್ಣನಾಗಿದ್ದಾನೆ. ಮೂವತ್ತಾರು ತತ್ವರೂಪಿಯಾಗಿ ವಿಶ್ವಾತ್ಮಕನಾಗಿದ್ದಾನೆ. ಸಕಲ ಪ್ರಳಯಾಕಾಲಾದಿ ಸಪ್ತಪ್ರಮಾತೃವಾಗಿದ್ದಾನೆ. ಪರಾ ಪಶ್ಯಂತೀ ಮಧ್ಯಮಾ ವೈಖರೀ ರೂಪವಾದ ಶಬ್ದಾತ್ಮಕನಾಗಿದ್ದಾನೆ. ತನ್ನ ಸ್ವಾತಂತ್ರ್ಯ ಶಕ್ತಿಯ ವಿಲಾಸವು ದೇಶ, ಕಾಲ, ಆಕಾರಗಳಿಲ್ಲದ ಪ್ರಶಾಂತ ಸ್ಥಿತಿಯನ್ನು ಪಡೆಯುತ್ತದೆ. ಎಂಬಿವೇ ಮೊದಲಾದ ವಿಚಾರಗಳನ್ನು ಶಾಸ್ತ್ರದಿಂದ ತಿಳಿಯುವುದು ಮೊದಲನೆಯ ಘಟ್ಟ. ತತ್ವಶಾಸ್ತ್ರ ವಿಷಯಗಳನ್ನು ಕೇಳಿ ತಿಳಿಯುವುದರಿಂದ ಜೀವನಿಗೆ ಸ್ವಸ್ವರೂಪದರಿವುಂಟಾಗುತ್ತದೆ. ಹಾಗೆಯೇ ತತ್ವಸ್ವರೂಪ ಜ್ಞಾನವೂ ತಿಳಿಯಾಗುತ್ತದೆ. ಅಧಿಕಾರ ಭೇದದ ವ್ಯತ್ಯಾಸಗಳು ಮನವರಿಕೆಯಾಗುತ್ತವೆ. ಹಿಂದಿನ ಸಂಸ್ಕಾರಗಳಿಂದ ರೂಪುಗೊಂಡ ಇವನ ವ್ಯಕ್ತಿತ್ವದ ನಿಲುವು ವಿಶದವಾಗಿ ಗೋಚರಿಸುತ್ತದೆ. ಇಂತಹ ಪೂರ್ಣವಾದ ತಿಳಿವಳಿಕೆಯಿಂದ ಇವನು ತನ್ನ ಭಾವೀ ಕಾರ್ಯಕ್ರಮವನ್ನು ನಿರ್ಣಯಿಸಲು ಸಮರ್ಥನಾಗುತ್ತಾನೆ. ಈ ರೀತಿಯಾದ ಪೂರ್ವಸಿದ್ಧತೆಯಿಂದ ತನಗೆ ಬರುತ್ತಿರುವ ಭೇದ ಜ್ಞಾನಗಳನ್ನು ಮನನ ಮಾಡಬೇಕು. ಇವುಗಳ ವಿವೇಚನೆಯಿಂದ ಪ್ರಶಾಂತ ಸ್ಥಿತಿಯು ಅನುಭವಕ್ಕೆ ಬರುತ್ತದೆ. ಪ್ರಶಾಂತ ಸ್ಥಿತಿ, ಅಪ್ರಶಾಂತ ಸ್ಥಿತಿ ಈ ಎರಡು ದೆಶೆಗಳನ್ನೂ ಮನನ ಮಾಡುವುದಕ್ಕೆ ಸಮರ್ಥನಾದರೆ ತನ್ನಲ್ಲಿ ಯಾವಾಗಲೂ ನಡೆಯುತ್ತಿರುವ ವಿಕಲ್ಪ ವ್ಯಾಪಾರಗಳಾಗಿರುವ ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಅನುಸಂಧಾನ ಮಾಡಬಹುದು. ಇದರಿಂದ ವಿಕಲ್ಪಗಳಲ್ಲಿರುವ ತಿರೋಧಾನವು ಮನವರಿಕೆಯಾಗುತ್ತದೆ. ಅನುಗ್ರಹವನ್ನು ಊಹಿಸಲು ಸಮರ್ಥನಾಗುತ್ತಾನೆ, ಈ ಅಭ್ಯಾಸದಿಂದ ಜಾಗ್ರತ್ ಸ್ವಪ್ನ ಸುಷುಪ್ತಿಗಳ ವ್ಯತ್ಯಾಸ ಅವುಗಳಲ್ಲಿ ಉಂಟಾಗುತ್ತಿರುವ ಸುಖದುಃಖಗಳು ಸ್ಫುಟವಾಗಿ ಗೋಚರಿಸುತ್ತವೆ. ಈ ಎಲ್ಲ ವ್ಯಾಪಾರಗಳಿಗೂ ಆಶ್ರಯವಾಗಿರುವ ಚಿತಸ್ವರೂಪವು ನಿರ್ವಿಕಾರವಾದುದೆಂದು ಧೃಡ ವಿಶ್ವಾಸವೇರ್ಪಡುತ್ತದೆ. ಶಾಸ್ತ್ರಜ್ಞಾನವು ವಿಮರ್ಶಪೂರ್ವಕವಾದ ಮನನದಿಂದ ಅನುಭವಾರೂಢವಾಗಲಾಗಿ ಸ್ವರೂಪಾನುಸಂಧಾನ ರೂಪವಾದ ಧ್ಯಾನಕ್ಕೆ ಅರ್ಹನಾಗುತ್ತಾನೆ. ಸಾಧಕನು ತನ್ನಲ್ಲಿ ಅನುಭವಕ್ಕೆ ಬರುತ್ತಿರುವ ಭೇದ ಜ್ಞಾನಗಳನ್ನೂ ಪ್ರಶಾಂತ ಸ್ಥಿತಿಯನ್ನೂ ಪಂಚಕೃತ್ಯಗಳನ್ನೂ ಜಾಗ್ರತ್ ಸ್ವಪ್ನ ಸುಷುಪ್ತ್ಯಾದಿ ಅವಸ್ಥೆಗಳನ್ನೂ ಧ್ಯಾನಾಭ್ಯಾಸಗಳಿಂದ ಮನನ ಮಾಡಿ ತಾನು ಶಾಸ್ತ್ರ ತತ್ವದ ವಿಚಾರ ಸರಣಿಯಿಂದುಂಟಾದ ಸ್ವಾತ್ಮೀಕೃತವಾದ ಜ್ಞಾನದಿಂದ ಪ್ರತಿಬೋಧಿತನಾಗಿ ತಾನೇ ಆ ಶಿವನು ಎಂದು ತನ್ನ ಸ್ವರೂಪವನ್ನು ಗುರುತಿಸುವಿಕೆಯೇ ಪ್ರತ್ಯಭಿಜ್ಞೆ. ಹಿಂದೆ ಶಾಸ್ತ್ರಜ್ಞಾನದಿಂದುಂಟಾದ ಅರಿವು ಮತ್ತು ಪರಿಪಾಕದಿಂದ 'ಆ ಶಿವನೇ ನಾನು' ಎಂದು ಏರ್ಪಟ್ಟ ಅನುಭವ ಈ ಎರಡಂಶಗಳ ಐಕ್ಯವೇ ಪ್ರತ್ಯಭಿಜ್ಞಾ.

# ಲಿಂಗೈಕ್ಯ ಶ್ರೀ ಟಿ. ಎನ್. ಮಲ್ಲಪ್ಪನವರಿಗೆ ಶ್ರದ್ಧಾಂಜಲಿ

ದಿನಾಂಕ 16-12-1980ರಂದು ಲಿಂಗೈಕ್ಯರಾದ ಶ್ರೀ ಟಿ. ಎನ್. ಮಲ್ಲಪ್ಪನವರಿಗೆ ದಿನಾಂಕ 23-12-1980ರಂದು ಮಂಗಳವಾರ ಸಂಜೆ 6-00 ಗಂಟೆಗೆ ಬಸವ ಸಮಿತಿಯ ಅನುಭವ ಮಂಟಪ ಸಭಾಂಗಣದಲ್ಲಿ ಶ್ರದ್ಧಾಂಜಲಿಯನ್ನರ್ಪಿಸಲಾಯಿತು.

ಬಸವ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕ ಅವರು ಪ್ರಾಸ್ತಾವಿಕ ಭಾಷಣ ಮಾಡುತ್ತಾ, 'ಮಲ್ಲಪ್ಪನವರು ದೈವಾಧೀನರಾದ ದಿನವು ಬಸವ ಸಮಿತಿಯ ಇತಿಹಾಸದಲ್ಲಿ ಆಘಾತಕರ ದಿನ ಎಂದರು' ಇನ್ನೂ ಮುಂದುವರಿದು ಮಲ್ಲಪ್ಪನವರು ಜ್ಞಾನಿಗಳಾಗಿದ್ದಷ್ಟೇ ದಾನಿಗಳೂ ಆಗಿದ್ದರು. ಬಸವ ಸಮಿತಿಗೆ ಅವರು ಹಲವಾರು ವಿಧದಲ್ಲಿ ಆಧಾರ ಸ್ತಂಭವಾಗಿದ್ದರು. ಅವರು ಇಲ್ಲವಾದದ್ದು ಸಮಿತಿಗೆ ಅಪಾರ ನಷ್ಟ ಎಂದರು.

ಸಂತಾಪ ಸೂಚಕ ಭಾಷಣ ಮಾಡುತ್ತಾ ಕರ್ನಾಟಕದ ಹಿರಿಯ ನ್ಯಾಯವಾದಿಗಳಾದ ಶ್ರೀ ವಿ. ಕೃಷ್ಣಮೂರ್ತಿಗಳು ತಮ್ಮ ಹಾಗೂ ಮಲ್ಲಪ್ಪನವರ ಬಾಂಧವ್ಯವನ್ನು ಕುರಿತು ಮಾತನಾಡಿದರು. ಮಲ್ಲಪ್ಪನವರ ನ್ಯಾಯ ವಿಚಕ್ಷಣತೆಯನ್ನು ಉದಾಹರಣೆ ಸಹಿತವಾಗಿ ವಿವರಿಸಿದರು. ಅವರು ಸೃಜನಶೀಲ ವಿಚಾರವಾದಿಗಳಾಗಿರುವಂತೆಯೇ ಜಾಣ ನ್ಯಾಯಾಧೀಶರೂ ಆಗಿದ್ದರು. ಅವರ ತೀರ್ಪುಗಳು ಬುದ್ಧಿವಂತಿಕೆ ಹಾಗೂ ಹೃದಯವಂತಿಕೆಗಳ ಸಂಗಮವಾಗಿವೆ ಎಂದರು.

ಬಸವ ಸಮಿತಿಯ ಪ್ರಕಟನಾ ವಿಭಾಗದ ನಿರ್ದೇಶಕರಾದ ಡಾ. ಸಿದ್ಧಯ್ಯ ಪುರಾಣಿಕ ಅವರು ಮಲ್ಲಪ್ಪನವರನ್ನು "ವಿಶೇಷ ವ್ಯಕ್ತಿತ್ವವನ್ನು ಹೊಂದಿದ್ದ ಮಹಾನುಭಾವ, ವಿದ್ಯೆ ವಿನಯ ಎರಡನ್ನೂ ಒಳಗೊಂಡ ಸದ್ಗುಣ ಸಂಪನ್ನ, ಜ್ಞಾನಸಂಪನ್ನ" ಎಂದು ಕೊಂಡಾಡಿದರು. ಮಲ್ಲಪ್ಪನವರ ತೌಲನಿಕ ದೃಷ್ಟಿಕೋನವನ್ನು ನಾಡಿನ ಎಲ್ಲ ಪ್ರಖ್ಯಾತ ವಿದ್ವಾಂಸರೂ ಮೆಚ್ಚಿದ್ದಾರೆ. ಅವರು ದಿವಂಗತರಾದದ್ದು ಬಸವ ಸಮಿತಿಯ ಪ್ರಕಟಣ ವಿಭಾಗಕ್ಕೆ ತುಂಬಲಾರದ ನಷ್ಟ ಎಂದರು.

ಡಾ. ಎಂ. ಚಿದಾನಂದಮೂರ್ತಿಯವರು ಮಾತನಾಡುತ್ತಾ "ಮಲ್ಲಪ್ಪನವರು ನೂರಕ್ಕೆ ನೂರರಷ್ಟು ಶೈಕ್ಷಣಿಕ ವ್ಯಕ್ತಿಯಾಗಿದ್ದರು. ಶ್ರೀಯುತರನ್ನು ಭಾರತೀಯ

ದಿರುವನೇ' ಎಂದು ತಾನೂ ದೇವವಾದ್ಯಗಳನ್ನು ಮೊಳಗಿಸಿ, ದೇವಲೋಕದ ಹೂಗಳಿಂದ ಮಳೆ ಸುರಿಸಿದ, ತನ್ನ ಗುರುವಾದ ಭಟಾರರನ್ನು ಪೂಜಿಸಿ 'ನಿಮ್ಮ ಪ್ರಸಾದದಿಂದ ನನಗೆ ಇಷ್ಟು ದೊಡ್ಡ ವೈಭವ, ದೇವತ್ವ ಪ್ರಾಪ್ತವಾಯಿತು' ಎಂದು ವಂದಿಸಿ ದೇವಲೋಕಕ್ಕೆ ಮರಳಿದ. ಕನಕಧ್ವಜನೆಂಬ ಆ ದೇವನು ದೇವಸುಖಗಳನ್ನು ಅನುಭವಿಸಿ ಬಂದು ಇಲ್ಲಿ, ಸಂಪ್ರತಿ ಚಂದ್ರಗುಪ್ತನಾಗಿ ನೀನು ಹುಟ್ಟಿದ್ದೀಯೆ.

ಸಂಪ್ರತಿ ಚಂದ್ರಗುಪ್ತನಿಗೆ ಸಮಾಧಿಗುಪ್ತ ಭಟ್ಟಾರರು ಈ ರೀತಿ ಭವಾವಳಿಗಳನ್ನು ಹೇಳಿದರು. ಅದನ್ನು ಕೇಳಿ ಸಂತೋಷಪಟ್ಟು ವಂದಿಸಿ ದೊರೆ ಅರಮನೆಗೆ ಹಿಂತಿರುಗಿದ. ಹೀಗೆ ಹಲವು ಕಾಲ ಕಳೆಯಿತು. ಒಮ್ಮೆ ಶ್ರುತಕೇವಲಿಗಳಾದ ಭದ್ರಬಾಹುಭಟಾರರು ಅಲ್ಲಿಗೆ ಆಗಮಿಸಿದರು. ಒಂದು ದಿನ ದೊರೆಗೆ ಹದಿನಾರು ಕೆಟ್ಟ ಕನಸುಗಳಾದುವು. ಭದ್ರಬಾಹುಗಳನ್ನು ಕೇಳಿದ್ದಕ್ಕೆ ಮುಂದೆ ಕೆಟ್ಟ ಕಾಲ, ಭಯಂಕರ ಕ್ಷಾಮ ಬರುವುದನ್ನು ವಿವರವಾಗಿ ಎಲ್ಲ ತಿಳಿಸಿದರು. ಅದನ್ನು ಕೇಳಿ ಸಂಪ್ರತಿ ಚಂದ್ರಗುಪ್ತನು ತನ್ನ ಹಿರಿಯ ಮಗ ಸಿಂಹಸೇನನಿಗೆ ರಾಜ್ಯಪಟ್ಟ ಕಟ್ಟಿ, ಭದ್ರಬಾಹುಗಳ ಜತೆಯಲ್ಲಿ ಕರ್ನಾಟಕದ ಪ್ರಾಚೀನ ಕ್ಷೇತ್ರವಾದ ಶ್ರವಣಬೆಳಗೊಳಕ್ಕೆ ಬಂದು ಸಂಪ್ರತಿ ಚಂದ್ರ ಗುಪ್ತಮುನಿಯಾಗಿ ತಪಸ್ಸು ಮಾಡಿದ.

ಇದೊಂದು ಭವಾವಳಿ ಕಥೆ. ಜೈನ ವಾಙ್ಮಯದಲ್ಲಿ ಕಂಡು ಬರುವ ಈ ಕಥೆಯಲ್ಲಿ ಭವಾವಳಿಯೂ ಇದೆ, ಇತಿಹಾಸವೂ ಇದೆ. ಚರಿತ್ರೆಯ ಮಾತು ಹಾಗಿರಲಿ, ಇಲ್ಲಿನ ಭವಾವಳಿಯ ಸೊಗಸನ್ನು ಪರಿಭಾವಿಸೋಣ. ಸಾಮಾನ್ಯ ಜೀವವೊಂದು ಚಕ್ರವರ್ತಿ ಪದವಿಗೇರಿದ್ದು ಹೇಗೆಂಬುದು ಇಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಈ ಅಭಿವ್ಯಕ್ತಿಯಲ್ಲಿ ಜೀವದ ಏರೇರಿಕೆಯ ವಿಕಾಸ ಚಿತ್ರವನ್ನು ಕಾಣುತ್ತೇವೆ. ಯಾರು ಬೇಕಾದರೂ, ಎತ್ತರಕ್ಕೆ ಏರಬೇಕೆಂಬ ಬಯಕೆ ಇದ್ದರೆ ಏರಬಹುದು. ಸರಿಯಾದ ದಾರಿಯಲ್ಲಿ ನಡೆದರೆ ಸುಖ, ಸಂಮೃದ್ಧಿ, ಉತ್ತಮಗತಿ ಪ್ರಾಪ್ತಿ ಯಾರೊಬ್ಬರ ಸ್ವತ್ತೂ ಅಲ್ಲ. ಅದು ಎಲ್ಲ ಜೀವಿಗಳಿಗೂ ಮುಕ್ತವಾಗಿ ತೆರೆದಿದೆ. ಜೀವ ತನ್ನ ಸ್ವಪ್ರಯತ್ನದಿಂದ ಅದನ್ನು ಪಡೆದುಕೊಳ್ಳಬೇಕು, ಅದಕ್ಕೆ ಅರ್ಹವಾಗುವಂತೆ ವರ್ತಿಸಬೇಕು. ಇದು ಜೈನ ಸಿದ್ಧಾಂತದ ತಿರುಳು. ಒಂದು ಸಿದ್ಧಾಂತದ ಸಾರವನ್ನು, ಅದರ ಕ್ಲಿಷ್ಟ ಆವರಣಗಳನ್ನು ಕಳಚಿ, ಹೀಗೆ ಸರಳಸುಲಭಗೊಳಿಸಿರುವುದಕ್ಕೆ ಸಹಾಯವಾಗಿ ಒದಗಿ ಬಂದಿರುವುದು ಭವಾವಳಿಯ ಕಲ್ಪನೆ. ಈ ತಂತ್ರ ಕವಿಗಳಿಗೆ ಕಾಮಧೇನುವಾಗಿದೆ. ಪುರಾಣದ ಹೊರೆಯನ್ನು ಹೊತ್ತು ಹೊರಟ ಜೈನ ಕವಿಗಳಿಗೆ, ಧಾರ್ಮಿಕ ಅಸ್ವಾತಂತ್ರ್ಯದ ಬಂಧನವನ್ನು ಬಿಡಿಸಿಕೊಟ್ಟ ಭವಾವಳಿ ಕಲ್ಪನೆ ಪುರಾಣಗಳನ್ನು ಕಾವ್ಯದ ಪರಿವೇಷ ಪಡೆಯುವಂತೆ ಮಾಡಿವೆ. ಇದರಿಂದ

ಓದುಗರಿಗೆ, ಪಂಪ ಹೇಳುವಂತೆ, ಕಾವ್ಯಧರ್ಮ ಹಾಗೂ ಧರ್ಮಗಳ ಸಾಹಚರ್ಯದ ಸೊಗಸು ಮನಮುಟ್ಟುತ್ತದೆ ವಿಮರ್ಶಕ ಹಂಪನಾ ಅವರು ಹೇಳುವಂತೆ "ಜೈನ ಪುರಾಣಗಳ ಮೂಲೋದ್ದೇಶ ವೈರಾಗ್ಯ ಪ್ರತಿಪಾದನೆ. ಭವಾವಳಿಗಳ ಕಥಾಪ್ರಸಂಗ ಗಳು ಆ ನಿರೂಪಣೆಯ ಸಾರ್ಥಕತೆಗೆ ಅರ್ಪಿತವಾಗುತ್ತವೆ. ಪಂಪನಂಥವರು ಭವಾವಳಿ ಗಳನ್ನು ಪುರಾಣದ ಪರಿಸರಣದಿಂದ ಪ್ರತ್ಯೇಕವಾಗಿ ನೋಡಿದರೂ ಮನಸ್ಸಿಗೆ ಹಿಡಿಸು ತ್ತವೆ. ಆವರಣದಿಂದ ಹೊರಗಾಗಿಸಿ, ತನಿಯಾಗಿ ಪರಿಭಾವಿಸಿ ತಲ್ಲೀನಗೊಳಿಸುವ ಕಾವ್ಯದ ಸತ್ವ ನೀಳಾಂಜನೆ ನೃತ್ಯ, ಶ್ರೀಮತಿ–ವಜ್ರಜಂಘರ ಪ್ರಣಯ ಪ್ರಪಂಚ-ಮೊದಲಾದುವಕ್ಕೆ ಇವೆ. ಇಂಥ ಕಾವ್ಯಸತ್ವ ಎಲ್ಲ ಭವಾವಳಿಗೂ ಉಂಟೆಂದು ಸಾಮಾ ನ್ಯೀಕರಣಗೊಳಿಸಿ ಹೇಳುವಂತಿಲ್ಲ. ಆದರೆ ಇಂಥ ಶ್ರೀಮಂತ ಭವಾವಳಿಗಳು ರಸಿಕರನ್ನು ಪರವಶಗೊಳಿಸಿ, ಕಾವ್ಯಲೋಕಕ್ಕೆ ಕಮಾನುಕಟ್ಟಿ ಸ್ವಾಗತಿಸುತ್ತವೆ. ಆಯಾಸ ಗೊಂಡವನನ್ನು ನಿದ್ದೆ ಮೆಲ್ಲಮೆಲ್ಲನೆ ತನ್ನ ವಶಕ್ಕೆ ತೆಗೆದುಕೊಳ್ಳುವಂತೆ ಭವಾವಳಿಗಳು ಸಹೃದಯನನ್ನು ಸೆಳೆದು ಕಾವ್ಯದ ಚೆಲುವಿಗೆ ಕೊಂಡೊಯ್ಯುವ ಹರಿಗೋಲಾಗುತ್ತವೆ. ಜೀವನ–ವ್ಯಕ್ತಿ ಮೌಲ್ಯದ ಮಹತಿಯನ್ನು ಧ್ವನಿಸುವಲ್ಲೂ ಭವಾವಳಿಗಳು ದುಡಿಯು ತ್ತವೆ. ಹೀಗಾಗಿ ಭವಾವಳಿತಂತ್ರ ಕನ್ನಡ ಕವಿಗಳಿಗೆ ಕೈವೂಕ್ಕಸಿಧಿ, ಶ್ರೀಮಂತ ಭಂಡಾರ ಆಗಿದೆ. ಜೈನಧರ್ಮದ ಪರಿಭಾಷೆಯಿಂದ ಕಾವ್ಯ ಕೇವಲ ಪುರಾಣವಾಗಿ ಪರಿಣಮಿಸಿ ದಾಗಲೂ ಆ ಜೈನ ಪುರಾಣ ಕಾವ್ಯಗಳನ್ನು ಓದಿಸಿಕೊಂಡು ಹೋಗುವಂತೆ ಭವಾವಳಿ ಗಳು ಕಾಯಕಲ್ಪ ಪರಿಣಾಮ ತಂದು ಕೊಡುತ್ತವೆ. ನಿಜವಾಗಿ ನೋಡಿದರೆ ಈ ಭವಾ ವಳಿ ಕಲ್ಪನೆ ಕನ್ನಡ ವಾಙ್ಮಯಕ್ಕೆ ಒಂದು ವಿಶಿಷ್ಟಕೊಡುಗೆಯೆಂದು ಹೇಳಬೇಕು. ಜೈನ ತೀರ್ಥಂಕರರಿಗೂ ಈ ಭವಾವಳಿಗಳುಂಟು. ಕೇವಲ ಮೂರು ನಾಲ್ಕು ಭವಗಳಿಂದ ಹಿಡಿದು ಮೂವತ್ತುಮೂರು ಭವಗಳನ್ನು ಪಡೆದ ತೀರ್ಥಂಕರನಾದ ವರ್ಧಮಾನ ಮಹಾವೀರನನ್ನ ಕಾಣಬಹುದು. ಅಂದರೆ ಒಂದು ಜೀವ ತನ್ನ ಅತ್ಯುನ್ನತ. ಮಹೋನ್ನತಿಗೆ ಏರಲು ಆವಶ್ಯವಾದ ಶುದ್ಧಿ ಚಾರಿತ್ರ್ಯ ಸಂಯಮ ತಪಸ್ಸುಗಳಿಂದ ಕರ್ಮಾದಿಗಳ ಕೊಳೆ ತೊಳೆದು ಶುದ್ಧವಾಗುತ್ತಾ ವಿಕಾಸಗಾ ಮಿಯಾಗಬೇಕು. ಇಂಥ ಒಂದು ಊರ್ಧ್ವಗಾಮಿತ್ವವನ್ನೂ ಅಥವಾ ಕರ್ಮಬಂಧ ನವೇ ಹೆಚ್ಚಿಸಿಕೊಂಡು ಇದಕ್ಕೆ ತದ್ವಿರುದ್ಧವಾಗಿ ಸಾಗುವ ಅಧೋಗಾಮಿತ್ವವನ್ನೂ ಭವಾವಳಿ ತಂತ್ರ ಹೃದ್ಯವಾಗಿ ಬಿಂಬಿಸುತ್ತದೆ.

ಈ ಭವಾವಳಿ ಕಲ್ಪನೆಗೆ ವೈಜ್ಞಾನಿಕ ಬೆಂಬಲವೂ ಇದೆ. ಮನಸ್‌ಶಾಸ್ತ್ರದಲ್ಲಿ ಇದಕ್ಕೆ ಮಹತ್ವದ ಸ್ಥಾನವಿದೆ. ಕನ್ನಡ ವಾಙ್ಮಯದಲ್ಲಂತೂ ಭವಾವಳಿಗಳಿಗೆ ಬಹು ಹಿರಿಯ ಸ್ಥಾನವಿದೆ. ಅದರಿಂದಾಗಿರುವ ಪ್ರಯೋಜನವೂ ಮಹತ್ತರವಾದುದು. ●

# ‘ಸ್ಫೂರ್ತಿ ಜ್ಯೋತಿ’

ಸಹನೆ ಎಂಬುದು ಕಹಿವೃಕ್ಷ, ಆದರೆ ಅನುಭವಿಸುವವನಿಗೆ ಕಷ್ಟವಾದರೂ ಅದು ಕೊಡುವುದು ಸಿಹಿಫಲಗಳನ್ನು. —ಜರ್ಮನ್ ಗಾದೆ.

ಸದ್ಗುಣ ಎನ್ನುವುದು ಸುಗಂಧದಂತೆ; ಉರಿದಾಗ, ಅರೆದಾಗ ಅದರ ಸುವಾಸನೆ ಹೆಚ್ಚು. —ಫ್ರಾನ್ಸಿಸ್ ಬೇಕನ್

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ಓರೆ ಆವಿನ ಬೆನ್ನಲರಿಯ ಬೇಕೆ.
—ಬಸವಣ್ಣ

ಪ್ರಾರ್ಥನೆ ಇಲ್ಲದಿದ್ದರೆ, ನಾನು ಎಂದೋ ಹುಚ್ಚನಾಗಿರುತ್ತಿದ್ದೆ. —ಗಾಂಧೀಜಿ.

ಅಂಗಕ್ಕೆ ಆಚಾರವೇ ಚಲುವು; ಆತ್ಮಂಗೆ ಅರುಹೇ ಚಲುವು.
—ಷಣ್ಮುಖ ಸ್ವಾಮಿಗಳು.

ಒಳ್ಳೆಯ ಕಾನೂನುಗಳು ಇಲ್ಲದಿದ್ದರೂ ಅಡ್ಡಿಯಿಲ್ಲ, ಒಳ್ಳೆಯ ಜನರಿರಬೇಕು.
—ಅರಿಸ್ಟಾಟಲ್.

ನೀತಿಗೆ ಮೂಲ ವಿನಯ; ವಿನಯವೆಂದರೆ ಶಾಸ್ತ್ರಗಳ ಖಚಿತವಾದ ಅರಿವು. ವಿನಯವೆಂದರೆ ಇಂದ್ರಿಯ ಜಯವೂ ಹೌದು. ಅದನ್ನುಳ್ಳವನು ಶಾಸ್ತ್ರವನ್ನೂ ತಿಳಿಯುತ್ತಾನೆ. —ಸುಭಾಷಿತ ಸುಧಾನಿಧಿ.

ಇತರರಾಡಿಕೊಳ್ಳುವ ನಿಂದೆಯ ಮಾತನ್ನು ಯಾವನು ಲಕ್ಷಿಸುವುದಿಲ್ಲವೋ ಅಂಥವನು ಜಗತ್ತನ್ನೇ ಜಯಿಸಲು ಸಮರ್ಥನಾಗುತ್ತಾನೆ. —ಮಹಾಭಾರತ.

ಒಳ್ಳೆಯದನ್ನು ಮಾಡುವ ಗಳಿಗೆಯೇ ಜೀವನದ ಅತಿ ಸಾರ್ಥಕ ಗಳಿಗೆ.
—ವರ್ಡ್ಸ್‌ವರ್ತ್.

ನಮ್ಮ ಉನ್ನತ ಜೀವನವಿರುವುದು ಎಂದೂ ಎಡವದೆ ಇರುವುದರಲ್ಲಲ್ಲ, ಎಡವಿದಾಗ ಲೆಲ್ಲ ಮೇಲೇಳುವುದರಲ್ಲಿದೆ. —ಆಲಿವರ್ ಗೋಲ್ಡ್‌ಸ್ಮಿತ್.

ಬುದ್ಧಿವಂತರಾದವರು ಪುಸ್ತಕ ಮತ್ತು ಜೀವನ ಎರಡನ್ನೂ ಓದುತ್ತಾರೆ.
—ಲಿನ್ ಯುಟಾಂಗ್.

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಡಿ. ಜೆ. ರುದ್ರಪ್ಪ

**ಪ್ರತ್ಯಭಿಜ್ಞಾಶಾಸ್ತ್ರ** :– ಪ್ರತ್ಯಭಿಜ್ಞಾಶಾಸ್ತ್ರ ಎಂಬುದರಲ್ಲಿ ' ಪ್ರತ್ಯಭಿಜ್ಞಾ ' ಎಂಬ ಪದವು ಕಾಶ್ಮೀರ ಶಿವಾದ್ವೈತ ಶಾಸ್ತ್ರದ ರಹಸ್ಯವನ್ನು ಸೂಚಿಸುತ್ತದೆ. ಪ್ರತ್ಯಭಿಜ್ಞಾ ಎಂದರೆ 'ಅವನೇ ನಾನು' – 'ಆ ಶಿವನೇ ನಾನು' ಎಂದು ಮಲಾವೃತನಾದ ಜೀವನು ತನ್ನ ಸಹಜ ಸ್ವರೂಪವನ್ನು ಗುರುತಿಸುವುದು. ಎಲ್ಲಾ ಪ್ರಾಣಿಗಳೂ ಪ್ರತ್ಯಭಿಜ್ಞಾ ಎಂಬ ಅಂಶವನ್ನು ಒಂದಲ್ಲ ಒಂದು ರೀತಿ ಅನುಭವಿಸುತ್ತಿವೆ. ನಾವು ಮನೆಯಿಂದ ಹೊರಕ್ಕೆ ಹೋದರೆ ಮರಳಿ ನಾವು ಮನೆಯನ್ನು ಸೇರುವುದು ಪ್ರತ್ಯಭಿಜ್ಞೆಯಿಂದಲೇ. ಯಾವ ಮನೆಯಿಂದ ನಾವು ಹೊರಟಿರುವೆವೋ ಅದೇ ಮನೆ ಇದು ಎಂಬ ದೃಢವಾದ ತಿಳುವಳಿಕೆ ಬರದಿದ್ದರೆ ನಾವು ಆ ಮನೆಯೊಳಕ್ಕೆ ಬರುತ್ತಿರಲಿಲ್ಲ. 'ಗ್ರಹಣ ಸ್ಮರಣಯೋಃ ಐಕ್ಯಂ ಪ್ರತ್ಯಭಿಜ್ಞೆ' ಎಂಬಂತೆ ಈಗ ನೋಡಿದ್ದು ಹಿಂದೆ ನೋಡಿದ್ದು ಎರಡೂ ಒಂದೇ ಎಂಬ ತಿಳುವಳಿಕೆಯೇ ಪ್ರತ್ಯಭಿಜ್ಞಾ ಎನಿಸುವುದು. ಇದನ್ನು "ಪ್ರತ್ಯಕ್ಷ ಮೂಲಕವಾದ ಪ್ರತ್ಯಭಿಜ್ಞೆ" ಎನ್ನಬಹುದು.

ನಾವು ಒಬ್ಬ ಮನುಷ್ಯನ ಕಥೆಯನ್ನು ಕೇಳಿರುತ್ತೇವೆ. ಅವನ ಸ್ವರೂಪ ಸ್ವಭಾವಗಳನ್ನು ಪರೋಕ್ಷವಾಗಿ ತಿಳಿದಿರುತ್ತೇವೆ. ಅನುಮಾನದಿಂದ ಅವನು ಇಂತಹವನಿರಬಹುದೆಂದು ಊಹಿಸಿಯೂ ಇರುತ್ತೇವೆ. ಯಾವುದೋ ಒಂದು ಸಮಯದಲ್ಲಿ ಅದೇ ವ್ಯಕ್ತಿಯೊಡನೆ ನಾವು ವ್ಯವಹರಿಸುತ್ತಿದ್ದರೂ ನಾವು ಕೇಳಿರುವ ಮನುಷ್ಯನು ಇವನೇ ಎಂಬ ಜ್ಞಾನವು ನಮಗುಂಟಾಗುವುದಿಲ್ಲ. ಅವನ ಪರಿಚಯವಿರುವವರು 'ಅವನೇ ಇವನು' ಎಂದು ನಮ್ಮನ್ನೆಚ್ಚರಿಸಿದರೆ ಆಗ ಹಿಂದೆ ಕೇಳಿದ ಕಥೆಯನ್ನು ಜ್ಞಾಪಿಸಿಕೊಂಡು ' ಸೋಯಂದೇವದತ್ತಃ ' ಎಂಬಂತೆ ಅವನೇ ಇವನು ಎಂದು ಗುರುತಿಸುತ್ತೇವೆ.

ಪರಮಶಿವನಿಂದ ಜೀವನನ್ನು ಬೇರ್ಪಡಿಸಿ ಜೀವನನ್ನು ಸಂಸಾರಾವಸ್ಥೆಯಲ್ಲಿಟ್ಟಿರುವ ಬಂಧ. ಜೀವನು ಶಿವನಿಂದ ತಾನು ಬೇರೆಯಲ್ಲವೆಂದು ತಿಳಿದಾಗ ಪಾಶವು ಮಾಯವಾಗುವುದು. ಪಾಶವನ್ನು ಮಲವೆಂದು ಕರೆಯುವುದು ಈ ಸಂಪ್ರದಾಯ

# ಜೈನ ವಾಙ್ಮಯದಲ್ಲಿ ಭವಾವಳಿ

—ಕಮಲಾ ಹಂಪನಾ.

ಭಾರತೀಯ ವಾಙ್ಮಯದಲ್ಲಿ ಪುರಾಣಗಳಿಗೆ ಗಣ್ಯಸ್ಥಾನ ಕೊಟ್ಟಿದ್ದಾರೆ. ಹಿಂದಿನವರು ಈ ಪುರಾಣಗಳ ಲಕ್ಷಣಗಳನ್ನು ಈ ರೀತಿ ನಿರೂಪಿಸಿದ್ದಾರೆ; ಸರ್ಗಶ್ಚ ಪ್ರತಿಸರ್ಗಶ್ಚ ವಂಶೋಮನ್ವಂತರಾಣಿಚ। ವಂಶಾನುಚರಿತಂಚೈವ ಪುರಾಣಂ ಪಂಚ ಲಕ್ಷಣಂ. ಅಂದರೆ ಪುರಾಣದಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಪರಂಪರೆಗಳ ಚರಿತೆ ಎಂಬ ಅಯ್ದು ಲಕ್ಷಣಗಳಿರುತ್ತವೆ. ಜೈನ ಪುರಾಣಗಳಲ್ಲಿ ಈ ಅಯ್ದೂ ಲಕ್ಷಣಗಳು ಇರಬಹುದು, ಇವುಗಳಲ್ಲಿ ಒಂದೆರಡು ಇಲ್ಲದಿರಬಹುದು. ಆದರೆ ಇವುಗಳ ಜತೆಗೆ ಇನ್ನೂ ಕೆಲವು ಲಕ್ಷಣಗಳು ಅಲ್ಲಿ ಕಂಡುಬರುತ್ತವೆ. ತೀರ್ಥಂಕರ ಪುರಾಣಗಳಲ್ಲಿ ಪಂಚಕಲ್ಯಾಣಗಳು ಬರುತ್ತವೆ. ಒಟ್ಟಿನಲ್ಲಿ ಜೈನ ಪುರಾಣಗಳು ತ್ರಿಷಷ್ಟಿ ಶಲಾಕಾ ಪುರುಷರ ಚರಿತೆಗಳು. ಜೈನವಾಙ್ಮಯ ಬಹು ವಿಸ್ತಾರವಾದುದು. ಪ್ರಾಕೃತ (ಅದರಲ್ಲೂ ಮಾಗಧಿ ಶೌರಸೇನಿ ಅಪಭ್ರಂಶ ಪ್ರಾಕೃತ), ಸಂಸ್ಕೃತ ಮತ್ತು ದೇಶೀಯ ಭಾಷೆಗಳಲ್ಲಿ ಜೈನ ವಾಙ್ಮಯ ಪ್ರಾಚೀನ ಕಾಲದಿಂದ ರಚಿತವಾಗಿರುವುದು ಕಂಡುಬರುತ್ತದೆ.

ಜೈನ ವಾಙ್ಮಯದಲ್ಲಿ ಅಹಿಂಸೆ, ಅಸ್ತೇಯ, ಅಪರಿಗ್ರಹ, ಸತ್ಯ, ಬ್ರಹ್ಮಚರ್ಯ ಎಂಬ ಅಯ್ದು ಅಣುವ್ರತಗಳು, ಜೀವ-ಅಜೀವದ ಸ್ವರೂಪ, ಕರ್ಮ ಸಿದ್ಧಾಂತ–ಇವುಗಳ ಪ್ರಸ್ತಾಪ ದೀರ್ಘವಾಗಿರುತ್ತದೆ ಇವೆಲ್ಲಾ ಮುಖ್ಯವಾಗಿ ಜೈನ ತತ್ವದ ಅವಿಭಾಜ್ಯ ಅಂಗಗಳು. ಆದರೆ ಓದುಗನಿಗೆ, ಅದರಲ್ಲೂ ಜೈನೇತರ ವಾಚಕನಿಗೆ ಇವು ಎಷ್ಟರ ಮಟ್ಟಿಗೆ ರುಚಿಸುತ್ತವೆಂಬುದು ಸಂಶಯಾಸ್ಪದ. ಆದರಿಂದ ಇದನ್ನು ಬಲ್ಲ ಜೈನ ಪ್ರಾಜ್ಞ ಲೇಖಕರು ಜೈನ ಸಿದ್ಧಾಂತದ ಸ್ವಾರಸ್ಯ, ಸಾರ ಎಲ್ಲರಿಗೂ ಆಸ್ವಾದ್ಯವಾಗುವಂತೆ ಹೊಸತಂತ್ರವೊಂದನ್ನು ಕಲ್ಪಿಸಿಕೊಂಡರು. ಅದೇ ಭವಾವಳಿ. ಜೀವನದ ಹುಟ್ಟು ಬೆಳವಣಿಗೆ ಸಾವು, ಮತ್ತೆ ಹುಟ್ಟು ಸಾವು–ಹೀಗೆ ಮರುಹುಟ್ಟು ಮರುಸಾವುಗಳ ಒಂದು ನಿರಂತರ ಚಕ್ರಗತಿಯ ಪರಿಭ್ರಮಣೆಯನ್ನು ಭವಾವಳಿಯ ತಂತ್ರ ಚೆನ್ನಾಗಿ ಕನ್ನಡಿಸುತ್ತದೆ. ಬಿಗಿಯಾಗಿ, ಸಪ್ಪೆಯಾಗಿ, ಅರೋಚಕವಾಗಿ, ನಿಲ್ಲಬಹುದಾದ ಸಿದ್ಧಾಂತದ ಸಾರವನ್ನು ಭವಾವಳಿಯ ಎರಕದಲ್ಲಿ ಹಾಕಿ ತೆಗೆದದ್ದರಿಂದ ಅದಕ್ಕೊಂದು ಆಕರ್ಷಣೆ ಉಂಟಾಯಿತು. ಓದುಗರಿಗೆ ಆಸಕ್ತಿ ತಲೆದೋರಿತು. ಅದನ್ನು ಓದುವಾಗ ಜೀವನದ ಅನಂತಯಾತ್ರೆಯ ರಾಟಳಗತಿಯೂ ಗೊತ್ತಾಗುತ್ತದೆ.

ಬೇಸರವೂ ಕಾಣಿಸುವುದಿಲ್ಲ. ಹೀಗಾಗಿ ಭವಾವಳಿ ಜೈನ ವಾಙ್ಮಯವನ್ನು ಜನಪ್ರಿಯ ಗೊಳಿಸುವಲ್ಲಿ ಒಂದು ಯಶಸ್ವಿಯಾದ ಮಾಧ್ಯಮವಾಗಿ, ಸಂಕೇತವಾಗಿ ಪರಿಣಯಿಸಿತು. ಪುರಾಣಗಳನ್ನು ಸಾಮಾನ್ಯ ಧಾರ್ಮಿಕಸ್ತರದಿಂದ ಕಾವ್ಯದ ಎತ್ತರಕ್ಕೆ ಕೊಂಡೊಯ್ಯುವ ಸಾಧನವಾಗಿ ಭವಾವಳಿ ಸಲ್ಲಿಸಿದ ಕಾಣಿಕೆ ಅತ್ಯಮೂಲ್ಯವಾದುದು. ನೀತಿ, ಉಪ ದೇಶಗಳ ನೇರ ಬೋಧನ ವಿಧಾನಕ್ಕಿಂತ ಈ ಪರ್ಯಾಯ ಮಾರ್ಗ ಪರಿಣಾಮಕಾರಿ ಯಾದುದು. ಸಹೃದಯನನ್ನು ಓದು ಎಷ್ಟರಮಟ್ಟಿಗೆ ಲವಲವಿಕೆಯಿಂದ ಪ್ರಸನ್ನ ವಾಗಿರಿಸುತ್ತದೆಂಬುದಕ್ಕೆ ಕನ್ನಡದ ಹಳೆಯ ಗದ್ಯಗ್ರಂಥವಾದ ವಡ್ಡಾರಾಧನೆಯಿಂದ ಒಂದು ಪ್ರಸಂಗವನ್ನು ಇಲ್ಲಿ ಉದಾಹರಿಸುವುದರ ಮೂಲಕ ಸ್ಪಷ್ಟಪಡಿಸಬಹುದು.

ಮಗಧ ದೇಶದ ಪಾಟಲಿಪುತ್ರವನ್ನು ನಂದದೊರೆ ಆಳುತ್ತಿದ್ದಾಗ ಒಮ್ಮೆ ಚಾಣ ಕ್ಯನನ್ನು ಅವಮಾನ ಪಡಿಸಿದ. ಚಾಣಕ್ಯ ಪ್ರತಿಜ್ಞೆ ಮಾಡಿ ನಂದನನ್ನು ನಾಶ ಮಾಡಿ ತನ್ನ ಶಿಷ್ಯ ಚಂದ್ರಗುಪ್ತನನ್ನು ರಾಜನನಾಗಿ ಮಾಡಿದ. ಚಂದ್ರಗುಪ್ತನ ಮಗ ಬಿಂದುಸಾಗರ. ಅವನ ಮಗ ಅಶೋಕ. ಅವನ ಮಗ ಕುಣಾಲ. ಈ ಕುಣಾ ಲನ ಮಗನೇ ಸಂಪ್ರತಿ ಚಂದ್ರಗುಪ್ತ. ಈತ ರಾಜ್ಯವಾಳುತ್ತಿರುವಾಗ ಒಂದು ಸಲ ಸಮಾಧಿಗುಪ್ತರೆಂಬ ಆಚಾರ್ಯರು ಬಂದರು. ಸಂಪ್ರತಿ ಚಂದ್ರಗುಪ್ತ ಮಹಾರಾಜ ಹೋಗಿ ನಮಸ್ಕರಿಸಿ ತನ್ನ ಜನ್ಮಾಂತರಗಳ ವಿಷಯವಾಗಿ ಕೇಳಿದ. ಆಗ ಅವರು ಅವನ ಭವಾವಳಿಗಳನ್ನು ಹೀಗೆ ಹೇಳಿದರು.

ಅವಂತಿ ದೇಶದ ವೈದಿಶ ಪಟ್ಟಣವನ್ನು ಜಯವರ್ಮ ಆಳುತ್ತಿದ್ದ. ಹತ್ತಿರದ ಪಲಾಶಕೂಟವೆಂಬ ಊರಿನಲ್ಲಿ ದೇವಿಲ-ಪೃಥ್ವಿಶ್ರೀ ಎಂಬ ವರ್ತಕರಿದ್ದರು. ಪೃಥ್ವಿಶ್ರೀ ಗರ್ಭಿಣಿಯಾಗುತ್ತಿದ್ದಂತೆ ಅವರ ಧನಕನಕ ಹಾಳಾಯಿತು. ವ್ಯಾಪಾರಕ್ಕೆಂದು ಗಾಡಿ ಗಳಲ್ಲಿ ಸರಕುಗಳನ್ನು ತುಂಬಿ ಹೊರಟಾಗ ದಾರಿಗಳ್ಳರು ಲೂಟಿ ಮಾಡಿದರು. ಅದೇ ಸಮಯದಲ್ಲಿ ಪೃಥ್ವಿಶ್ರೀ ಗಂಡು ಮಗು ಹೆತ್ತಳು. ನಂದಿಮಿತ್ರನೆಂದು ಹೆಸ ರಿಟ್ಟರು. ಮಗುವಿಗೆ ಎರಡು ತಿಂಗಳು ತುಂಬುತ್ತಿದ್ದಂತೆ ತಾಯಿಯೂ ಸತ್ತು ಹೋದಳು. ನಂಟರಿಷ್ಟರು ನಂದಿಮಿತ್ರನನ್ನು ಸಾಕಿದ್ದಕ್ಕೆ, ಅವರಿಗೂ ಅದೇಗತಿ ಯಾಯಿತು. ಆಗ ಅವರೆಲ್ಲ ಸೇರಿ ತಬ್ಬಲಿಯನ್ನು ಓಡಿಸಿಬಿಟ್ಟರು. ನಂದಿಮಿತ್ರ ಅಲೆದಾಡುತ್ತಾ ಭಿಕ್ಷೆ ಬೇಡುತ್ತಾ ಹೇಗೋ ಕಾಲ ನೂಕುತ್ತಿದ್ದು ಹದಿನೈದನೆಯ ವಯಸ್ಸಿಗೆ ವೈದಿಶ ಪಟ್ಟಣಕ್ಕೆ ಬಂದ.

ಅಲ್ಲಿ ಕಾಷ್ಠಕೂಟ ಎಂಬುವನು ಕಟ್ಟಿಗೆ ಹೊರೆ ಹೊತ್ತು ಪಟ್ಟಣಕ್ಕೆ ಬರು ತ್ತಿದ್ದ. ಅವನೂ ನಂದಿ ಮಿತ್ರನೂ ಮಾತಾಡುತ್ತಾ ಒಂದು ತೋಟದಲ್ಲಿ ವಿಶ್ರಾಂತಿ ಗೆಂದು ನಿಂತರು. ನಂದಿಮಿತ್ರ ತನ್ನ ತಲೆಗೆ ಆಧಾರವಾಗಿ, ಎಂಟು ಜನ ಕೂಡಿ

ದರೂ ಅಲುಗಿಸಲಾರದ ಬಂಡೆಯನ್ನು ತಂದು ಇಟ್ಟುಕೊಂಡನು. ಕಾಷ್ಠಕೂಟ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಊಟ ಹಾಕಿ ತನ್ನಲ್ಲೇ ಇರಿಸಿ ಕೊಂಡ. ಹತ್ತು ಮಂದಿ ತರುವಷ್ಟು ಕಟ್ಟಿಗೆ ಹೊರೆಯನ್ನು ನಂದಿಮಿತ್ರ ಒಬ್ಬನೇ ತರುತ್ತಿದ್ದ. 'ಊಟ ಮಾತ್ರ ಹೊಟ್ಟೆತುಂಬಾ ಹಾಕಬೇಡ. ಹೆಚ್ಚು ಎಣ್ಣೆ ಹಾಕಬೇಡ. ಸ್ನಾನಕ್ಕೆ ಕೇಳಿದರೂ ಎರೆಯಬೇಡ' ಎಂದು ಕಾಷ್ಠಕೂಟ ತನ್ನ ಹೆಂಡತಿ ಜಯಘಂಟಿಗೆ ತಾಕೀತು ಮಾಡಿದ್ದ. ಇದರಂತೆ ಬದುಕು ನಡೆಯಿತು. ಕಾಷ್ಠ ಕೂಟ ಹಣವಂತನಾದ.

ಒಂದು ದಿನ ಜಯಘಂಟಿ ನಂದಿಮಿತ್ರನ ಮೇಲೆ ಕರುಣೆಯಿಂದ ಹೊಟ್ಟೆ ತುಂಬ ಊಟ ಬಡಿಸಿದಳು. ತೃಪ್ತಿಯಾಗಿ ಉಂಡ ನಂದಿಮಿತ್ರ ಮಾರನೆ ದಿನ ಕಾಷ್ಠಕೂಟನನ್ನು 'ಅಯ್ಯಾ ನನಗೆ ಉಟ್ಟುಕೊಳ್ಳಲು ಏನೂ ಇಲ್ಲ. ಒಂದು ದಮ್ಮಕ್ಕಾದರೂ ಬಟ್ಟೆಯನ್ನು ತೆಗೆದುಕೊಡಿ' ಎಂದು ಕೇಳಿದ. ಅವನು ಮನೆಗೆ ಬಂದವನೇ ಹೆಂಡತಿಯನ್ನು 'ಹೊಟ್ಟೆತುಂಬಾ ಅನ್ನ ಹಾಕಿದೆಯಾ ಎಂದು ಪ್ರಶ್ನಿಸಿದ' ಅವಳು 'ಹಬ್ಬವಾದುದರಿಂದ ಅಯ್ಯೋಪಾಪ ಎಂದು ಬಡಿಸಿದೆ' ಎಂದಳು. ಕೋಪದಿಂದ ಹೆಂಡತಿಗೆ ಸಾಯಬಡಿದು ಮನೆಯಿಂದ ಹೊರಗೆ ಅಟ್ಟಿದ. ನಂದಿ ಮಿತ್ರ 'ಅವ್ವಾ, ನಿನ್ನನು ಹೊಡೆದದ್ದೇಕೆ? ' ಎಂದು ಕೇಳಿದ. 'ನಿನಗೆ ಹೊಟ್ಟೆ ತುಂಬ ಊಟ ಹಾಕಿದ್ದಕ್ಕೆ" ಎಂದಳು. 'ಇಂತಹ ಪರಮ ನೀಚನ ಮನೆಯಲ್ಲಿ ಮಾರಿ ಇರಲಿ' ಎಂದು ಹೇಳಿ ನಂದಿಮಿತ್ರನೂ ಹೊರಟುಹೋದ. ತಾನೇ ದಿನವೂ ಕಟ್ಟಿಗೆ ಮಾರಿ ಜೀವಿಸತೊಡಗಿದ. ಅವನ ಕೆಟ್ಟ ಅದೃಷ್ಟದಿಂದ ದೊಡ್ಡ ಹೊರೆ ತಂದರೂ ಒಂದು ಹಣವೂ ದೊರಕದೆ ಅಂಬಲಿಗೊ ಎಣ್ಣೆಗೊ ಇಟ್ಟಿಗೊ ಕಟ್ಟಿಗೆ ಹಾಕುತ್ತಾ ಕಾಲ ನೂಕುತ್ತಿದ್ದ.

ಒಮ್ಮೆ ನಂದಿಮಿತ್ರ ಕಟ್ಟಿಗೆ ಹೊರೆ ತರುತ್ತಿದ್ದ. ಜೈನಾಚಾರ್ಯರೊಬ್ಬರು ಆಹಾರಕ್ಕಾಗಿ ನಗರಕ್ಕೆ ಹೋಗುತ್ತಿದ್ದರು. ನಂದಿಮಿತ್ರನೂ ಕುತೂಹಲದಿಂದ ಅವರ ಹಿಂದೆಯೇ ಹೋದ. ಜೈನ ಗುರುಗಳನ್ನು ದೊರೆ ಸ್ವಾಗತಿಸಿದ. ರಾಣಿ ಕಾಲು ತೊಳೆದಳು. ಅವರ ಜತೆಯಲ್ಲೇ ಬಂದ. ಈ ಜೋಳು ತಲೆಯ ನಂದಿಮಿತ್ರನಿಗೂ ರಾಣಿಯೇ ಕಾಲು ತೊಳೆದು ಒಳಗೆ ಕರೆದುಕೊಂಡು ಹೋದರು. ನಂದಿಮಿತ್ರ ಆ ಜೈನ ಆಚಾರ್ಯರ ಶಿಷ್ಯನೆಂದು ತಿಳಿದು ಊಟೋಪಚಾರಗಳನ್ನು ನೀಡಿದರು. ರಾಜಾನ್ನದ ಕೂಳು, ಹೆಸರ ತೊವ್ವೆ, ಬೆಣ್ಣೆ ಕಾಸಿದ ಪರಿಮಳ ಬೀರುವ ತುಪ್ಪ, ಹಲವು ತೆರದ ಕಾಯಿಪಲ್ಲೆಗಳು' ಪಾಯಸ, ಪೂರಿ, ಇಡ್ಡಲಿಗೆ ಸೋದಿಗೆ, ಲಾವಣಿಗೆ, ಘೃತಪೂರ' ಲಡ್ಡುಗೆ, ಮಂಡಗೆ, ನಾನಾ ತೆರದ ಪಾನೀಯಗಳು- ಇವನ್ನು ಬಡಿಸಿದರು. ಹುಟ್ಟಿದಂದಿನಿಂದ ಕನಸಿನಲ್ಲೂ ಕಂಡು ಅರಿಯದ ದಿವ್ಯಾಹಾರವನ್ನು ಕಂಠ

ಪೂರ್ತಿ ಉಂಡ. ಜೈನಾಚಾರ್ಯರು ಆಹಾರವಾದ ಮೇಲೆ ' ಕರ್ಮಕ್ಷಯವಾಗಲಿ, ದಾನ ಅಕ್ಷಯವಾಗಲಿ ' ಎಂದು ಹರಸಿ ಅಲ್ಲಿಂದ ಹೊರಟು ಊರ ಹೊರಗಿನ ಬ[illegible] ದಿಗೆ ಬಂದರು. ನಂದಿಮಿತ್ರನೂ ಅವರ ಹಿಂದೆಯೇ ಬಂದ.

ಮೂರನೆಯ ದಿನ ಮಹಾರಾಣಿ 'ಹೋಗಿ ಕಿತ್ತಯ್ಯನ ಕಾಲುಗಳಿಗೆ ಎರಗಿ 'ಇಂದು ದಯವಿಟ್ಟು ನಮ್ಮ ಮನೆಯಲ್ಲಿ ಆಹಾರ ಸ್ವೀಕರಿಸಬೇಕು' ಎಂದು ಪ್ರಾರ್ಥಿಸಿ ದಳು "ಮಹಾದೇವಿಯೇ ನನಗೆ ನಮಸ್ಕರಿಸುತ್ತಿದ್ದಾಳೆ, ಇದೆಲ್ಲ ತಪಸ್ಸಿನ ಫಲ. ಮುಂದೆ ಇನ್ನೂ ದೊಡ್ಡದಾಗಬಹುದು" ಎಂದು ಕಿತ್ತಯ್ಯ ಯೋಚಿಸಿ, 'ಅವ್ವಾ ಇಂದು ನನಗೆ ಉಣ್ಣಲು ಅವಕಾಶವಿಲ್ಲ, ಉಪವಾಸ ಮಾಡುತ್ತಿದ್ದೇನೆ' ಎಂದು ನುಡಿದ. ಮರುದಿನ ಮಹಾಮಂತ್ರಿ ಬಂದು ಬೇಡಿಕೊಂಡ, ಅಂದೂ ಉಪವಾಸ ವೆಂದು ಉತ್ತರ ಬಂತು. ರಾಜಶ್ರೇಷ್ಠಿ ಇನ್ನೊಂದು ದಿನ ಹೋದಾಗಲೂ ಅದೇ ಉತ್ತರ. ಕಿತ್ತಯ್ಯ ರಾತ್ರಿಹಗಲು ಬಿಡದೆ ಪಂಚ ನಮಸ್ಕಾರ ಹೇಳುತ್ತಿದ್ದ. ರಾಜ ಸಭೆಯಲ್ಲಿ ರಾಜರಾಣಿಯರು ಕಿತ್ತಯ್ಯನ ಗುಣವನ್ನೂ ತಪೋಮಹಿಮೆಯನ್ನೂ ಕೊಂಡಾಡಿದರು. ಅಂದು ಯುವರಾಜನು ಬಂದು ಆಹಾರವನ್ನು ತನ್ನ ಮನೆಯಲ್ಲಿ ಸ್ವೀಕರಿಸಲು ಯಾಚಿಸಿದ. "ಇಂತಹ ಕ್ಷತ್ರಿಯ ಪುತ್ರರುಗಳೆಲ್ಲ ನನಗೆ ನಮಸ್ಕಾರ ಮಾಡುತ್ತಿದ್ದಾರೆ, ಊಟಕ್ಕೇನೀಗ ಅಂತಹ ಸಂಕಟ ! ಈ ತಪಸ್ಸಿನ ಫಲವನ್ನು ಇನ್ನೂ ಮುಂದಕ್ಕೆ ನೋಡುತ್ತೇನೆ' ಎಂದು ಭಾವಿಸಿ 'ಇಂದು ಉಪವಾಸ ಕೈಕೊಂಡಿ ದ್ದೇವೆ' ಎಂದು ಯುವರಾಜನಿಗೆ ಉತ್ತರ ಕೊಟ್ಟ.

ಹೀಗೆ ಆರು ದಿನ ಆಹಾರವಿಲ್ಲದೆ ಕಳೆಯಿತು, ಏಳನೆಯ ದಿನ ಕಿತ್ತಯ್ಯ (ನಂದಿಮಿತ್ರನು) ಜೈನಭಟಾರರಿಗೆ ನಮಸ್ಕರಿಸಿ 'ಭಟಾರಾ, ಇಷ್ಟು ಕಾಲವೂ ಉಂಡದ್ದು ಸಾಕು. ಇನ್ನು ನನಗೆ ಬದುಕಿರುವವರೆಗೂ ಯಾವಜ್ಜೀವವೂ ಉಪವಾಸ ದೀಕ್ಷೆ ಕೊಡಬೇಕು' ಎಂದು ವಿಜ್ಞಾಪಿಸಿದ. ಭಟಾರರು ನೀವು ನಿಜವಾಗಿಯೂ ಮಹಾ ಪುರುಷರು. ನಿಮ್ಮಂತಹ ಧೈರ್ಯವಂತರೂ, ಸತ್ಯವಂತರೂ ಇಲ್ಲ ಇಷ್ಟು ಕಾಲ ತಪಸ್ಸುಮಾಡಿರುವ ನಮಗೇ ಇಷ್ಟೊಂದು ಧೈರ್ಯ ಸತ್ವ ಇಲ್ಲ. ಎಂದು ಹೇಳಿ ಆಹಾ ರಕ್ಕೂ ಶರೀರಕ್ಕೂ ನಿವೃತ್ತಿ ದೀಕ್ಷೆ ಕೊಟ್ಟು ಉಪದೇಶವಿತ್ತರು. ಕಿತ್ತಯ್ಯನ ಸುದ್ದಿ ಹಬ್ಬಿತು. ಅರಸನಾದಿಯಾಗಿ ಪಟ್ಟಣದ ಜನರೆಲ್ಲ ಸೇರಿದರು. ಭಾರೀ ಸಂಭ್ರಮ ದಿಂದ ಅರ್ಚನೆ ಮಾಡಿದರು. ಕಿತ್ತಯ್ಯ ಶುಭ ಪರಿಣಾಮದಿಂದ ಅಂದು ದೇಹತ್ಯಾಗ ಮಾಡಿದ. ಕನಕಧ್ವಜನೆಂಬ ದೇವನಾಗಿ ಹುಟ್ಟಿದ. ಕಿತ್ತಯ್ಯನ ದೇಹತ್ಯಾಗ ವಾರ್ತೆ ಕೇಳಿ ರಾಜಪರಿವಾರ ಪಟ್ಟಣಿಗರು ಎಲ್ಲ ನೆರೆದು ದೇಹವನ್ನು ಪೂಜಿಸಿದರು. ಇದನ್ನು ಕನಕಧ್ವಜದೇವನಾಗಿ ಹುಟ್ಟಿದ ನಂದಿಮಿತ್ರ ಕಿತ್ತಯ್ಯನು ಕಂಡು ' ನನ್ನ ದೇಹಕ್ಕೆ ಇವರು ಇಷ್ಟು ಭಾರಿಯಾಗಿ ಉತ್ಸವ ಮಾಡುತ್ತಿರುವಾಗ ನಾನು ಮಾಡ

ಕೇಳಿದರು. ಈ ಸಂದರ್ಭದಲ್ಲಿ ಎಲ್ಲ ಪಿ. ಯು. ಸಿ. ವಿದ್ಯಾರ್ಥಿಗಳನ್ನು ಕರೆಸಿ ಸರ್ವರೂ ಅನ್ಯೋನ್ಯವಾಗಿ ಬಾಳಬೇಕೆಂದೂ ಹೊರಗಿನ ದುಷ್ಕರ್ಮಿಗಳ ಕೈವಾಡಕ್ಕೆ ಗುರಿಯಾಗಬಾರದೆಂದೂ ಹಿತವಚನಗಳನ್ನು ಹೇಳಲಾಯಿತು. ಇದಾದ ನಂತರ ಅವರು ಇಲ್ಲೆ ಉಳಿದುಕೊಳ್ಳಲು ಒಪ್ಪಿಕೊಂಡರು.

ದಿನಾಂಕ: 4-2-81 ರ ಪ್ರಾತಃಕಾಲ, ಉನ್ನತ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸುಮಾರು 20 ವಿದ್ಯಾರ್ಥಿಗಳು ಬಂದು, ಪಿ. ಯು. ಸಿ. ತರಗತಿಯಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಸಹಕರಿಸುತ್ತಿಲ್ಲವೆಂದೂ ತಿಳಿಸಿ ಮಠವನ್ನು ಬಿಟ್ಟುಹೋಗಲು ತಯಾರಾಗಿರುವುದಾಗಿ ಹೇಳಿದರು. ಪುನಃ ಅವರಿಗೆ ತಮ್ಮ ಸಹಪಾಠಿಗಳಿಂದ ಏನಾದರೂ ತೊಂದರೆಯಾದಲ್ಲಿ ಅಂತಹವರ ಮೇಲೆ ಕಟ್ಟುನಿಟ್ಟಾದ ಕ್ರಮ ತೆಗೆದುಕೊಳ್ಳುವುದಾಗಿ ಭರವಸೆ ಕೊಡಲಾಯಿತು. ನಾವೇ ಸ್ವಯಂ ಮನವಿ ಮಾಡಿಕೊಂಡರೂ ಸಹ ಕ್ಯಾತ್ಸಂದ್ರದ ಕೆಲವರ ಒತ್ತಡದ ಮೇರೆಗೆ ಮಠವನ್ನು ಬಿಟ್ಟುಹೋದರು. ಇವರು ಸುಮಾರು 60-80 ಜನ ವಿದ್ಯಾರ್ಥಿಗಳಿರಬಹುದು.

ಮೇಲ್ಕಂಡ ಈ ಪ್ರಕರಣವು ಸಂಪೂರ್ಣವಾಗಿ ಹೊರಗಿನ ದುಷ್ಕರ್ಮಿಗಳ ಕೈವಾಡದಿಂದ ನಡೆದಿದೆಯೆಂದು ಮನವರಿಕೆಯಾದ ಮೇಲೆ, ವಿಷಯವನ್ನು ಜಿಲ್ಲಾಧಿಕಾರಿಗಳಿಗೂ ತಿಳಿಸಲಾಯಿತು. ಆಗ ಮಠಕ್ಕೆ ಭೇಟಿಕೊಟ್ಟ ಜಿಲ್ಲಾಧಿಕಾರಿಗಳು ವಿದ್ಯಾರ್ಥಿಗಳಿಗೆ ಸೂಕ್ತ ವಿವೇಕವನ್ನು ಹೇಳಿ ಅವರನ್ನು ವಾಪಸ್ಸು ಕರೆದುಕೊಂಡು ಬರುವುದಾಗಿ ತಿಳಿಸಿದರು. ಈ ವಿದ್ಯಾರ್ಥಿಗಳನ್ನು ನಾವಾಗಿಯೇ ಎಂದೂ ಮಠ ಬಿಟ್ಟು ಹೋಗುವಂತೆ ಅಪೇಕ್ಷಿಸಿದವರಲ್ಲವೆಂದೂ, ಅವರು ತಾವಾಗಿಯೇ ಹೋಗಿರುವರೆಂದು ತಿಳಿಸಿ ಅವರನ್ನು ವಾಪಸ್ಸು ಕರೆದುಕೊಂಡು ಬರುವುದಕ್ಕೆ ತುಂಬ ಸಂತೋಷವೆಂದು ತಿಳಿಸಿದೆವು. ನಮ್ಮ ಮಠದ ಆಡಳಿತಾಧಿಕಾರಿಗಳೂ ಸಹ ವಿದ್ಯಾರ್ಥಿಗಳನ್ನು ಹಿಂದಕ್ಕೆ ಕರೆದುತರಲು ಜಿಲ್ಲಾಧಿಕಾರಿಗಳ ಜೊತೆ ಹೋದರು. ಜಿಲ್ಲಾಧಿಕಾರಿಯವರ ಹಿತೋಪದೇಶವನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದುದಲ್ಲದೇ ಅವರ ಮುಖಂಡರಾದ ಕ್ಯಾತ್ಸಂದ್ರದ ಶ್ರೀ ಕೆ. ಎನ್. ರಾಜಣ್ಣನವರು ಹೇಳಿದಂತೆ ಮಾತ್ರ ನಡೆದುಕೊಳ್ಳುವುದಾಗಿ ವಿದ್ಯಾರ್ಥಿಗಳು ತಿಳಿಸಿದರು.

ಮಠದ ಆಡಳಿತಾಧಿಕಾರಿಗಳ ಪ್ರಾರ್ಥನೆ ಮೇರೆಗೆ ಶ್ರೀ ಕೆ. ಎನ್. ರಾಜಣ್ಣನವರು ಆ ದಿನ ಸಂಜೆ ವಿದ್ಯಾರ್ಥಿಗಳನ್ನು ಮಠಕ್ಕೆ ಕರೆದು ತರುವುದಾಗಿ ತಿಳಿಸಿದರು. ಹೀಗೆ ಸಂಜೆ ಕೆಲವು ವಿದ್ಯಾರ್ಥಿಗಳನ್ನು ಮಾತ್ರ ವಾಪಸ್ಸು ಕರೆದುಕೊಂಡು ಬರುವಾಗ ಅವರ ಜೊತೆ ಮಠಕ್ಕೆ ಸಂಬಂಧಿಸದೇ ಇರುವ ನೂರಾರು ಜನರನ್ನೂ ಸಹ ಜೊತೆಯಲ್ಲಿ ಅವರು ಕರೆದುಕೊಂಡು ಬಂದಿದ್ದರು. ಹಾಗೆ ಬಂದ ದುಷ್ಕರ್ಮಿಗಳು ಶ್ರೀ ಮಠದ ವಿರುದ್ಧ ಇಚ್ಛಾನುಸಾರ ಎಲ್ಲಾ ವಿಧವಾದ ಘೋಷಣೆಗಳನ್ನು ಕೂಗುತ್ತಿದ್ದು, ದೃಶ್ಯ ವ್ಯವಸ್ಥಿತ ಆಕ್ರಮಣಕ್ಕೆಂಬಂತೆ ಕಾಣುತ್ತಿತ್ತು. ಇದೆಲ್ಲವೂ ಲೂಟಿ ಮಾಡಿ ಬೆಂಕಿ ಹಚ್ಚುವ ಸನ್ನಾಹದಲ್ಲಿದ್ದಂತೆ ಕಾಣುತ್ತಿತ್ತು. ಈ ಗುಂಪಿನ ಮುಖಂಡ

ರಾಗಿ ಬಂದಿದ್ದ ಶ್ರೀ ಕೆ. ಎನ್. ರಾಜಣ್ಣನೂ ಕೂಡ ನಮ್ಮನ್ನು ಭೇಟಿ ಮಾಡದೆ ಎಲ್ಲರನ್ನು ಶ್ರೀ ಮಠದ ಮಹಾದ್ವಾರದಲ್ಲಿ ಬಿಟ್ಟು ಯಾವುದೋ ವಾಹನದಲ್ಲಿ ಹೊರಟುಹೋದರು. ಇದಾದ ನಂತರ ಬಂದಿದ್ದ ಇತರರೂ ಸಹ ವಿದ್ಯಾರ್ಥಿಗಳನ್ನು ಬಿಟ್ಟು ಕ್ಯಾತ್ಸಂದ್ರದ ಕಡೆಗೆ ಹೋದರು. ಅಲ್ಲಿ ಹೋಗಿ ಮಠಕ್ಕೆ ಸೇರಿದ ಪೆಟ್ರೋಲ್ ಬಂಕಿಗೆ ಕಲ್ಲು ಹೊಡೆದು ಅಲ್ಲಿದ್ದ ನೌಕರರ ಮೇಲೆ ಕೈಮಾಡಿ ಇದ್ದಂತಹ ಹಣ ವನ್ನೆಲ್ಲಾ ದೋಚಿಕೊಂಡು ಹೋದರು. ಪೆಟ್ರೋಲು ಬಂಕಿಗೆ ಬೆಂಕಿ ಹಚ್ಚುವ ಅವರ ಪ್ರಯತ್ನ ಪೋಲೀಸಿನವರಿಂದ ವಿಫಲಗೊಂಡಿತು.

ಮಹಾದ್ವಾರದಲ್ಲಿದ್ದ ವಿದ್ಯಾರ್ಥಿಗಳಿಗೆ ಊಟಕೊಡಲಾಯಿತು. ನಾವು ಸಹ ಅವರನ್ನು ಭೇಟಿ ಮಾಡಿದೆವು. ಊಟವಾದ ನಂತರ ಈ ವಿದ್ಯಾರ್ಥಿಗಳು ತಮ್ಮ ಹಳ್ಳಿಗಳಿಗೆ ಹೋಗಲು ಇಚ್ಛೆ ವ್ಯಕ್ತಪಡಿಸುತ್ತಾ ಪೋಲೀಸು ವಾಹನದಲ್ಲಿ ತುಮಕೂರಿಗೆ ಮುಟ್ಟಿಸಲು ಕೇಳಿದರು. ಅನುಕಂಪ ತೋರಿಸಿ ಪೋಲೀಸಿನವರು ತುಮಕೂರಿಗೆ ಬಿಡಲು ಕ್ಯಾತ್ಸಂದ್ರ ಮುಖಾಂತರ ಕರೆದೊಯ್ಯುವಾಗ ಅಲ್ಲಿನ ಕೆಲವು ದುಷ್ಕರ್ಮಿಗಳ ಒತ್ತಡದಿಂದ ಆ ರಾತ್ರಿ ಕ್ಯಾತ್ಸಂದ್ರದಲ್ಲೆ ಉಳಿದ ಪ್ರಯುಕ್ತ ಇಲ್ಲಿನ ವಾತವರಣ ಪ್ರಕೋಪಕ್ಕೀಡಾಯಿತು. ನಂತರ ಜಿಲ್ಲಾಧಿಕಾರಿಗಳು 144ನೇ ನಿಯಮ ವನ್ನು ಜಾರಿ ಮಾಡಿ ಶಾಲಾ ಕಾಲೇಜುಗಳನ್ನು ದಿನಾಂಕ 16-2-81ರವರೆಗೆ ಮುಚ್ಚುವಂತೆ ಆಜ್ಞೆ ಹೊರಡಿಸಿದರು. ಹೀಗೆ ಆಜ್ಞೆ ಹೊರಡಿಸಿದ ಮೇಲೆ ವಿದ್ಯಾರ್ಥಿ ಗಳು ಊರಿಗೆ ಹೋಗುತ್ತಿದ್ದ ಈ ಸಂದರ್ಭದಲ್ಲಿ ಕ್ಯಾತ್ಸಂದ್ರದ ಕೆಲವರ ದುಷ್ಕರ್ಮಿ ಗಳ ಬಲವಂತಕ್ಕನುಸಾರವಾಗಿ ಅಲ್ಲಿಯೇ ಉಳಿದುಕೊಂಡರೆಂದು ತಿಳಿದುಬಂದಿದೆ.

144ನೇ ನಿಯಮವನ್ನು ಜಾರಿಗೆ ತಂದ ಪರಿಣಾಮವಾಗಿ ಕಣದಲ್ಲಿ ಒಕ್ಕಣೆ ಕೆಲಸದಲ್ಲಿ ನಿರತರಾಗಿದ್ದ ಕೆಲಸಗಾರರನ್ನು ಹಿಂತೆಗೆದುಕೊಳ್ಳಬೇಕಾಯಿತು. ಈ ಮಧ್ಯೆ ಕಣದ ಹತ್ತಿರ ಜನರು ಕಡಿಮೆ ಇದ್ದುದ್ದನ್ನು ನೋಡಿ ಕೆಲವು ದುಷ್ಕರ್ಮಿಗಳು ಕಣಕ್ಕೆ ಬಂದು ಹೊಕ್ಕಣೆ ಮಾಡಿದ್ದ ಹುಲ್ಲು ಬಣವೆ ಮತ್ತು ಗುಡಿಸಲಿಗೆ ಬೆಂಕಿಯಿಟ್ಟರು. ಮಠದಲ್ಲಿದ್ದವರು ಕೂಡಲೇ ಹೋಗಿ ಬೆಂಕಿಯನ್ನು ನಂದಿಸಿದರು. ಸಕಾಲದಲ್ಲಿ ಜಾಗ್ರ ತರಾಗಿ ಕ್ರಮಕೈಗೊಂಡದ್ದರಿಂದ ಬೆಂದು ಬೂದಿಯಾಗುತ್ತಿದ್ದ ಎರಡು ಲಕ್ಷ ರೂಪಾಯಿ ಬೆಲೆ ಬಾಳುವಂತಹ ದವಸಧಾನ್ಯ ಹಾಗೂ ಹುಲ್ಲು ಉಳಿದಂತಾಯಿತು.

ಈ ಸಂದರ್ಭದಲ್ಲಿ ಕಳೆದ 1973ರಲ್ಲಿ ಇದೇ ತರಹದ ದುರ್ಘಟನೆಯ ಬಗ್ಗೆ ಜ್ಞಾಪಿಸಿಕೊಳ್ಳುತ್ತಾ ಕೇವಲ ಕೆಲವೇ ರಾಜಕೀಯ ಪ್ರೇರಣೆಯಿಂದ ಕೂಡಿದ ಸ್ವಾರ್ಥಿ ಗಳು ಸಂಸ್ಥೆಯ ನಿಸ್ವಾರ್ಥ ಸೇವೆಗೆ ಜಾತೀಯ ಬಣ್ಣವನ್ನು ಹಚ್ಚಿ ಪರಿಸ್ಥಿತಿಯ ಲಾಭ ವನ್ನು ಗಳಿಸುತ್ತಿದ್ದಾರೆ; ಎಂದು ಅಭಿಪ್ರಾಯಪಡಬೇಕಾಗಿದೆ. ಈ ಕಾರಣ ಹೊರತು ಮಠವನ್ನು ದ್ವೇಷಿಸುವ ಪ್ರಬಲ ಕಾರಣಗಳಾವೂ ಇರುವುದಿಲ್ಲ.

# ಜೇನು — ದುಂಬಿ

—ನಳಿನಕುಮಾರಿ.

**ಮಧುವನ್ನು ಕುಡಿವ ದುಂಬಿ ಮತ್ತು ಕಡಜಗಳ ನಡುವೆ ನಡೆವ ಸಂಭಾಷಣೆ.**



ಕಾವ್ಯವಾಹಿನಿ

ನನ್ನ ನಿನ್ನ ಹೋಲಿಕೆ
ಹೆಚ್ಚು ಕಡಿಮೆ ಸೇರಿದೆ,
ಮಧುವ ಕುಡಿವ ಚಲುವರು
ನಾನು ನೀನು ರಸಿಕರು.

ಹೊನ್ನ ಬಣ್ಣ ಬಳೆಗಳು
ನನ್ನ ಬೆನ್ನ ಬಿಗಿದಿವೆ,
ನಿನ್ನ ರೂಪ ರಾಶಿಗಿಂತ
ನನ್ನ ಕಾಂತಿ ಸೊಗಸಿದೆ.

ಆದರೂ ..

ನಿನ್ನ ಮೆಚ್ಚೋ ಮನುಜರು
ನನ್ನನೇಕೆ ಒಪ್ಪರು........ ?

ಎಂದು ಮೊರೆವ ದುಂಬಿಯೊಂದು ಜೇನ-ಬಂಧು ಕೇಳಿತು.

ನಿನ್ನ ಬಣ್ಣ ಚಲುವಿದೆ
ನಿನ್ನ ಚಲುವು ಸೊಗಸಿದೆ,
ನಿನ್ನ ಸೊಗಸು ಅರಳದೆ
ಭಾವ ಮಾತ್ರ ಬಾಗಿದೆ.

ನೀನೆಂಬ ಘನತೆಯಲ್ಲಿ
ಜಗದ ಭಾವ ಮೌನದಲ್ಲಿ
ಮಧುವ ಮಿಡಿವ ಹೃದಯಲ್ಲಿ
ಮನುಜ ನಲಿವ ಮನದಲಿ.

ಅದಕೇ....

ನಾನೆಂಬ ಭಾವವನ್ನು
ಯಾರೂ ಒಪ್ಪರು.... !

ಎಂದು ಮಧುವ ಕುಡಿದ ಜೇನ-ಬಂಧು ಸುತ್ತಿ ಸುತ್ತಿ ಇಳಿಯುತ್ತಿದ್ದ ದುಂಬಿಗ್ಹೇಳಿತು.

# ಹಾಲು ಹಾಲಾಹಲವಾಗಬಹುದೆ?

—ಪ. ರಾಮಕೃಷ್ಣಶಾಸ್ತ್ರಿ

ಉದರಕ್ಕುಂಬಾ ಹಾಲೇ ವಿಷವಾದರೆ? ಅಮೃತವೆಂದು ಅನಾದಿಯಿಂದಲೂ ನೀವು ನಂಬಿರುವ ಹಸುವಿನ ಹಾಲು ಹಾಲಾಹಲವೇ ಆಗಬಹುದು ಎನ್ನುತ್ತಾರೆ ವೈದ್ಯಶಾಸ್ತ್ರಜ್ಞರು. ಹಾಲು ಕುಡಿಯುವ ಐದು ಮಂದಿಯಲ್ಲಿ ಒಬ್ಬನಿಗೆ ಅದು ಜೀರ್ಣವಾಗುವುದಿಲ್ಲ. ಹದಿನೈದು ಜನರಲ್ಲಿ ಒಬ್ಬನಿಗೆ ಉದರಕ್ಕುಂಬಾ ಹಾಲು ವಿಷವಾಗುತ್ತದೆ. ಹಾಲಿನಲ್ಲಿ ಸಕ್ಕರೆಯ ಅಂಶ ರಾಸಾಯನಿಕವಾಗಿ ಸಂಕೀರ್ಣವಾಗಿದೆ. ಅದರಲ್ಲಿರುವ ವಿಶಿಷ್ಟವರ್ಗದ ಕಿಣ್ವಗಳು ಈ ಅಂಶವನ್ನು ಸುಲಭವಾಗಿ ಜೀರ್ಣಿಸುತ್ತವೆ. ಮನುಷ್ಯನ ಬಾಲ್ಯಾವಸ್ಥೆಯಲ್ಲಿ ಅವನ ಶರೀರದಲ್ಲಿ ಈ ಕಿಣ್ವಗಳು ಅಧಿಕ ಪ್ರಮಾಣದಲ್ಲಿದ್ದು, ಬೆಳೆಯುತ್ತಿದ್ದಂತೆ ಅವು ವಿರಳವಾಗುತ್ತಾ ಹೋಗುತ್ತವೆ. ಈ ಕಿಣ್ವಗಳು ದಕ್ಷಿಣ ಅಮೇರಿಕ ಹಾಗೂ ಯುರೋಪಿಯದ ಜನರಲ್ಲಿ ಜಗತ್ತಿನ ಬೇರಾವುದೇ ದೇಶದ ಜನರಿಗಿಂತ ಅಧಿಕವಾಗಿ ಕಂಡು ಬಂದಿವೆ. ಅದರಿಂದಾಗಿ ಈ ದೇಶಗಳ ಜನರಿಗೂ ಆಫ್ರಿಕ, ಪೂರ್ವ ಏಶಿಯುಗಳವರಿಗೂ ಹಾಲು ಅಪಥ್ಯವಾಗಿದೆ.

ಯುರೋಪಿನ ಒಂದು ದೇಶ ಪೆರುವಿನ ಪೌಷ್ಟಿಕಾಂಶದ ಕೊರತೆಯನ್ನು ನೀಗಲು ಹಾಲಿನ ಹುಡಿಯನ್ನು ಉದಾರವಾಗಿ ಕಳುಹಿಸಿತು. ಆದರೆ ಅದನ್ನು ಕುಡಿದ ಜನರೆಲ್ಲಾ ಹೊಟ್ಟೆನೋವಿಗೆ ತುತ್ತಾದರು. ಗಯಟೆಮಾಲಾದ ಜನರು ಹೀಗೆ ಲಭಿಸಿದ ಹಾಲಿನ ಹುಡಿಯನ್ನು ತಿನ್ನುವ ಬದಲು ಗೋಡೆಗಳಿಗೆ ಬಣ್ಣದಂತೆ ಹಚ್ಚಿದರು. ಇದೇರೀತಿ ನೈಜೀರಿಯನ್ನರು ಹಾಲಿನಲ್ಲಿ ಕೆಟ್ಟ ಶಕ್ತಿಗಳಿವೆಯೆಂದು ಅದನ್ನು ನಿಷೇಧಿಸಿದ್ದಾರೆ.

ಅನೇಕ ಮಹಿಳೆಯರು ದೇಹಸೌಂದರ್ಯ ಕೆಡುತ್ತದೆಂಬ ದೃಷ್ಟಿಯಿಂದ ಮಗುವಿಗೆ ಹಾಲುಣಿಸದೆ ಹಸುವಿನ ಹಾಲನ್ನು ಕುಡಿಸಿಬಿಡುತ್ತಾರೆ. ಎರಡು ದಶಕಗಳ ಕಾಲ ಮಕ್ಕಳ ಪಾಲನೆ ಪೋಷಣೆಯ ಬಗೆಗೆ ಸಂಶೋಧನೆ ಮಾಡಿರುವ ಅಮೇರಿಕಾದ ವಾಲ್ಟರ್ ಡಬ್ಲ್ಯು ಸಾಕೆಟ್ ಅವರು, "ಹಾಲು ಶ್ರೇಷ್ಠ ಆಹಾರ ನಿಜ—ಆದರೆ ಮಗುವಿಗೆ ಅಲ್ಲ; ದನದ ಕರುವಿಗೆ" ಎನ್ನುತ್ತಾರೆ. ಹಸುವಿನ ಕರುವಿಗೆ ನಾಲ್ಕು ಜಠರಗಳಿವೆ. ಒಂದೇ ಜಠರವಿರುವ ಮಾನವನಿಗೆ ಅದು ಹೇಗೆ ಕರಗೀತು? ಎಂದು ಕೇಳುತ್ತಾರೆ.

ಜಗತ್ಪ್ರಸಿದ್ಧ ಹೋಮಿಯೊಪಥಿ ಲೇಖಕರಾದ ಡಾ॥ ಪಿ.ಎಚ್. ಕ್ಲಾರ್ಕ್ 'ಎನ್ ಸೈಕ್ಲೊಪಿಡಿಯಾ ಆಫ್ ಮೆಟೀರಿಯಾ ಮೆಡಿಕಾ' ಎಂಬ ಗ್ರಂಥದಲ್ಲಿ ಬಲವಂತವಾಗಿ

ಹಾಲು ಕುಡಿಸುವುದರಿಂದ ದೃಷ್ಟಿಮಾಂದ್ಯ, ಮಧುಮೇಹ, ಲಾಲಾಮೇಹ, ತಲೆ ನೋವು ಮುಂತಾದ ಜಾಡ್ಯಗಳು ತಲೆದೋರಬಹುದೆಂದು ಎಚ್ಚರಿಸಿದ್ದಾರೆ. ಆಕಳ ಹಾಲಿನಲ್ಲಿ ನಮ್ಮ ಎದೆಹಾಲಿಗಿಂತ ಕ್ಯಾಲ್ಸಿಯಂ ಶೇ. 4, ಫಾಸ್ಫರಸ್, ಶೇ. ೬, ಕ್ಯಾಸೀನ್ ಎಂಬ ಪ್ರೋಟೀನ್ ಶೇ. 3 ಭಾಗ ಅಧಿಕವಾಗಿದೆ. ಇವನ್ನು ಶೋಧಿಸಲು ಮಗುವಿನ ಮೂತ್ರಪಿಂಡಕ್ಕೆ ಸಾಧ್ಯವಾಗದೆ ನಿಶ್ಶಕ್ತಿ, ಬಾಲಗ್ರಹ ಪೀಡೆ, ಮೂತ್ರಪಿಂಡದ ವ್ಯಾಧಿಗಳು, ಆಹಾರದಲ್ಲಿ ನಿರಾಸಕ್ತಿಯುಂಟಾಗುತ್ತದೆ. ಎಳೆಯ ಮಗುವಿನ ಶೋಧಕಾಂಗಳು ಹಾಲಿನಲ್ಲಿರುವ ಫಾಸ್ಫೇಟನ್ನು ಹೊರಹಾಕಲು ಅಸಮರ್ಥವಾದ ಕಾರಣ ಸೆಟೆರೋಗವೂ ಬರಬಹುದು.

ಹಾಲಿಗೆ ಕಫವರ್ಧಕ ಗುಣವಿರುವುದರಿಂದ ಉಬ್ಬಸ, ಕಫಗಳು ಆದರಿಂದ ಹೆಚ್ಚಾಗುತ್ತದೆ. ಬೆಳಗ್ಗೆ ಹಾಲು ಕುಡಿಯುವುದರಿಂದ ಅಜೀರ್ಣ, ಮಲಬದ್ಧತೆ ಉಂಟಾಗುವುದೆಂದೂ ರಾತ್ರಿ ಹಾಲುಕುಡಿದ ಬಳಿಕ ವ್ಯಾಯಾಮ ಮಾಡದೆ ಮಲಗಿದರೆ ಅದು ಅಹಿತಕರವಾಗುವುದೆಂದು ಮದನಪಾಲ ನಿಘಂಟಿನಲ್ಲಿ ಹೇಳಿದೆ. ಪರಮಾಣು ಸ್ಫೋಟದ ಈ ಕಾಲದಲ್ಲಿ ವಾತಾವರಣದಲ್ಲಿ ವಿಕಿರಣಯುಕ್ತವಾದ ಸ್ಟ್ರೋಂಟಿಯಂ-90 ಎಂಬ ಧಾತು ಅಧಿಕವಾಗಿದೆ, ಇದನ್ನು ಸಸ್ಯಗಳು ಹೀರಿಕೊಂಡಿರುವುದರಿಂದ ಆ ಸಸ್ಯವನ್ನು ತಿನ್ನುವ ಹಸುಗಳ ಹಾಲಿಗೂ ಅದು ಮಿಶ್ರವಾಗುತ್ತದೆ. ತಾಯಿ ಹಾಲಿಗಿಂತ ದನದ ಹಾಲಿನಲ್ಲಿ ಈ ವಿಕಿರಣದ ತೀವ್ರತೆ ಎಂಟುಪಾಲು ಹೆಚ್ಚಾಗಿದೆ. ಇದು ಎಲುಬಿನಲ್ಲಿ ಶೇಖರವಾಗಿ ಅನೀಮಿಯಾ ರೋಗ ತರಬಹುದು, ಮಲಮೂತ್ರ ವಿಸರ್ಜನೆಗೆ ಅಡ್ಡಿಯಾಗಬಹುದು. ಆದರೆ ತಾಯಿಯ ಹಾಲಿನಲ್ಲಿರುವ ಈ ಅಂಶ ಮಲಮೂತ್ರಗಳೊಂದಿಗೆ ಬಹುಪಾಲು ಹೊರಬೀಳುತ್ತದೆ. ಹಸುವಿನ ಹಾಲನ್ನೇ ಬಳಸುವ ಮಕ್ಕಳಿಗೆ ಬರುವ ಇನ್ನೊಂದು ತೀವ್ರತರ ವಾಧಿ 'ಅಲ್ಸರೇಟಿವ್ ಕೊಲೈಟಿಸ್' ಇದರಿಂದ ನಡು ಹೊಟ್ಟೆಯಲ್ಲಿ ನೋವು, ಮುರಿತವುಂಟಾಗಿ ಹೊಟ್ಟೆ ಜಾಡಿಸಲ್ಪಡುತ್ತದೆ. ಮಲದೊಂದಿಗೆ ರಕ್ತ ಮತ್ತು ಕೀವು ಇರುತ್ತದೆ. ತಾಯ ಹಾಲು ಕುಡಿಯುವ ಮಕ್ಕಳು ಈ ವ್ಯಾಧಿಗೆ ತುತ್ತಾಗುವುದಿಲ್ಲ.

ಹೆಚ್ಚಾಗಿ ಹಾಲು ಕುಡಿಯುವ ಮಕ್ಕಳು ಸದಾ ನೆಗಡಿಯಿಂದ ನರಳುತ್ತಾರೆ. ಅವರ ಶರೀರವೂ ಪುಷ್ಟಿಯಾಗುವುದಿಲ್ಲ ಎಂದು ಹೋಮಿಯೋಪಥಿ ತಜ್ಞ ಡಾ॥ ಬರ್ನೆಟಾ ಹೇಳುತ್ತಾರೆ. ಹಾಲಿನಲ್ಲಿ ಕ್ಯಾಲ್ಸಿಯಂ ಅಧಿಕಪ್ರಮಾಣದಲ್ಲಿದೆ. ಇದು ದೇಹದಲ್ಲಿ ಸಂಚರಿಸುವುದರಿಂದ ಮಲಬದ್ಧತೆ ವಾಂತಿಗಳಿಗೆ ತುತ್ತಾಗಿ ಶರೀರ ಕೃಶವಾಗುವ 'ಹೈಪರ್ ಕಾಲ್ಸಿಮಿಯಾ' ವ್ಯಾಧಿ ಬರುತ್ತದೆ. ಇದು ೩ ರಿಂದ ೭ ತಿಂಗಳೊಳಗಿನ ಮಕ್ಕಳಲ್ಲೇ ಕಾಣಬರುತ್ತದೆ. ಈ ವ್ಯಾಧಿ ತಾಯ ಹಾಲುಣ್ಣುವ ಮಗುವಿಗೆ ಬರುವುದಿಲ್ಲ ಎಂದು ಡಾ॥ ಜೆ.ಸಿ. ಹ್ಯಾಪ್ರಾಥ್ ಬರೆದಿದ್ದಾರೆ. ಕೆನಡಾದ ವಿಶ್ವಪ್ರಸಿದ್ಧ ಸಂಶೋಧಕ ಡಾ॥ ಹ್ಯಾನ್ಸ್ ಸೆಲಿಯವರು ಕ್ಯಾಲ್ಸಿಯಂ ಅತಿರೇಕವಾದರೆ ಚರ್ಮ ಸುಕ್ಕು

ಗಟ್ಟಿಲಾರಂಭಿಸಿ, ಕೂದಲು ಉದುರಿ, ದೃಷ್ಟಿಮಾಂದ್ಯ ಉಂಟಾಗುವ ವಾರ್ಧಕ್ಯದ ಚಿಹ್ನೆಗಳು ತಲೆದೋರುತ್ತವೆಂದು ಎಚ್ಚರಿಸುತ್ತಾರೆ.

ಹಲವು ರೋಗಗಳನ್ನು ಹರಡುವಲ್ಲಿ ನೀರಿನಂತೆಯೇ ಹಾಲೂ ಪ್ರಧಾನಪಾತ್ರ ವಹಿಸಿದೆಯೆಂದು ವೈಜ್ಞಾನಿಕ ಪರೀಕ್ಷೆಗಳಿಂದ ಸಿದ್ಧಗೊಂಡಿದೆ. ಕ್ಷಯ, ಆಮಶಂಕೆ ಪೋಲಿಯೋ, ಡಿಫ್ತೀರಿಯಾ, ಟೈಫಾಯ್ಡ್, ಸಾಂಕ್ರಾಮಿಕ ಗರ್ಭಪಾತವೇ ಮೊದಲಾದ ರೋಗಗಳಿಗೆ ಹಾಲು ಕಾರಣವಾದ ಹಲವು ಉದಾಹರಣೆಗಳಿವೆ. ನಮ್ಮ ದೇಶದಲ್ಲಿ ಪ್ರತಿ ನೂರು ದನಗಳಲ್ಲಿ ೨೫ ರಿಂದ ೪೦ ದನಗಳ ಹಾಲಿನಲ್ಲಿ ಕ್ಷಯರೋಗ ಹರಡುವ ಅಣುಗಳಿವೆಯೆಂಬುದನ್ನು ಸಿದ್ಧಗೊಳಿಸಲಾಗಿದೆ.

ಹಾಲನ್ನು ಗಟಗಟನೆ ಕುಡಿಯುವುದರಿಂದ ಅದು ಒಂದು ತಾಸಿನೊಳಗೆ ಜೀರ್ಣವಾಗಿ ಬೇಗನೆ ರಕ್ತಗತವಾಗುತ್ತದೆ. ನಿಧಾನವಾಗಿ ಚಪ್ಪರಿಸುತ್ತಾ ಕುಡಿಯುವುದರಿಂದ ಹೊಟ್ಟೆಯಲ್ಲಿ ಹೆಪ್ಪುಗಟ್ಟಿ, ಜೀರ್ಣವಾಗಲು ಹೆಚ್ಚು ಹೊತ್ತು ಬೇಕಾಗುತ್ತದೆ. ಜ್ವರ ಪೀಡಿತರ ಪಾಲಿಗಂತೂ ಹಾಲು ವಿಷ ಸದೃಶವೆಂದು ವೈದ್ಯಗ್ರಂಥಗಳಲ್ಲಿ ಉಲ್ಲೇಖಿತವಾಗಿದೆ. ಮಾಂಸಾಹಾರದಿಂದ ಅಧಿಕ ಕೊಬ್ಬು ಪಡೆಯುವ ಜನರಿಗೆ ಹಾಲು ಖಂಡಿತ ಅಪಾಯಕಾರಿ. ಮೀನು, ಖರ್ಜೂರ, ಈರುಳ್ಳಿ, ಬೆಳ್ಳುಳ್ಳಿ, ನಿಂಬೆಹಣ್ಣು, ಮದ್ಯಗಳೊಂದಿಗೆ ಹಾಲನ್ನು ಸೇವಿಸಬಾರದು. ಹಾಲನ್ನು ಅರ್ಧ ತಾಸು ಬಿಸಿಲಿನಲ್ಲಿಟ್ಟರೂ ಅದರಲ್ಲಿರುವ ಅನ್ನಾಂಗಗಳು ನಾಶವಾಗುತ್ತವೆ.

ಮಕ್ಕಳ ಆರೋಗ್ಯ ವಿಚಾರದಲ್ಲಿ ಜೀವಮಾನವಿಡೀ ಶ್ರಮಿಸಿದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಪಾಲ್‌ಜಾರ್ಜ್ 'ಮಕ್ಕಳಿಗೆ ದನದ ಹಾಲಿಗಿಂತ ಹಣ್ಣು ತಿನ್ನಿಸುವುದೇ ಉತ್ತಮ' ಎನ್ನುತ್ತಾರೆ. ಹಸಿವಾದಾಗಲೆಲ್ಲ ಮಗುವಿಗೆ ಹಾಲು ಕುಡಿಸುವುದೂ ಶಾರೀರಿಕ ಅಸ್ವಸ್ಥತೆಗೆ ದಾರಿ. ಹಾಲನ್ನು ದೊಡ್ಡವರೂ ಮಿತಿಮೀರಿ ಸೇವಿಸುವುದು ಶ್ರೇಯಸ್ಕರವಲ್ಲವೆಂದು ತಜ್ಞರ ಭಾವನೆ. ತಾಯಿಗೆ ಎದೆ ಹಾಲಿಲ್ಲದಿದ್ದರೆ ಎದೆ ಹಾಲಿರುವ ಬೇರೊಬ್ಬ ಹೆಂಗಸಿನ ಮೊಲೆಯೂಡಿಸಲು ವ್ಯವಸ್ಥೆ ಕೈಗೊಳ್ಳುವುದೂ ಯೋಗ್ಯವೇ. ರಷ್ಯದಲ್ಲಿ ಮಕ್ಕಳಿಗೆ ಉಣಿಸಿ ಉಳಿದ ಹಾಲನ್ನು ಯಂತ್ರದ ಮೂಲಕ ಹಿಂಡಿ ಪ್ಯಾಶ್ಚುರೈಸ್ ವಿಧಾನದಿಂದ ಶುದ್ಧಗೊಳಿಸಿ, ತಾಯಿ ಹಾಲಿಲ್ಲದ ಮಗುಳಿಗೆ ಪೂರೈಸುವ ವಿಧಾನ ರೂಢಿಯಲ್ಲಿದೆ.

ಹಾಲನ್ನು ಕಾಯಿಸಿದ ಬಳಿಕ ಅನೇಕರು ಕೆನೆಯನ್ನು ಬೆರಳಿನಿಂದ ಸರಿಸುತ್ತಾರೆ, ಬಾಯಿಂದ ಊದುತ್ತಾರೆ. ಇದರಿಂದ ರೋಗಾಣುಗಳುಂಟಾಗುತ್ತವೆ. ದನಗಳ ಕೆಚ್ಚಲನ್ನು ನೀರಿನಿಂದ ತೊಳೆದ ಮೇಲೆ ಬಟ್ಟೆಯಿಂದ ಒರಸದೆ ಹಾಲು ಹಿಂಡಿದರೆ ಆ ನೀರು ಹನಿಹನಿಯಾಗಿ ಹಾಲಿಗೆ ಬಿದ್ದು ರೋಗಕಾರಕವಾಗುತ್ತದೆ. ಹಾಲು ಹಿಂಡುವವರ ಕೈ, ಹಾಲು ತುಂಬಿಡುವ ಪಾತ್ರೆ ಆದಷ್ಟೂ ಶುಚಿಯಾಗಿರುವಂತೆ ಲಕ್ಷ್ಯವೀಯಬೇಕು.

( 9 ನೇ ಪುಟದಿಂದ )

ಮಾನವ ಇತಿಹಾಸದಲ್ಲಿ ಕಂಡುಬರುವ ಏಳು-ಬೀಳಿನಲ್ಲಿ ಈ ಎರಡರ ಗಣನೀಯ ಪ್ರಭಾವವನ್ನು ಗುರುತಿಸಬಹುದು. ಮನುಷ್ಯ ಯಾವಾಗ ತನ್ನ ನಾಡು, ನುಡಿ, ಧರ್ಮ, ಸಂಸ್ಕೃತಿಗಳ ಬಗ್ಗೆ ಆಸಕ್ತನಾಗಿ, ಸದಭಿರುಚಿಯಿಂದ ಅವುಗಳ ಮಹತ್ವವನ್ನು ಅರಿತು, ಅವುಗಳನ್ನು ಉಳಿಸಿ ಬೆಳೆಸುವ ಸದಭಿಮಾನವುಳ್ಳವನಾಗಿದ್ದನೋ ಆಗ ಉನ್ನತ ಮಟ್ಟದ ಸಂಸ್ಕೃತಿ ಬೆಳೆದು, ಸದ್ಧರ್ಮ ಬೆಳಗಿ ಮಾನವ ಜೀವನ ಉದಾತ್ತವೆನಿಸಿದೆ. ಅದೇ ಮನುಷ್ಯ ತನ್ನತನವನ್ನೇ ಮರೆತು ಅಭಿಮಾನಶೂನ್ಯನಾಗಿ ಕೀಳು ಅಭಿರುಚಿಯಿಂದ ಪಶುಜೀವನ ನಡೆಸಿದಾಗ ಬಾಳಿನ ಮೌಲ್ಯಗಳೆಲ್ಲ ಗಾಳಿಪಾಲಾಗಿ ಜನಜೀವನದ ಮಟ್ಟ ಕೆಳಗಿಳಿದಿದೆ. ಮಾನವ ಇತಿಹಾಸ ಈ ಎರಡೂ ಚಿತ್ರಗಳನ್ನು ನೀಡುತ್ತದೆ. ಮನುಷ್ಯ ಸದಭಿರುಚಿಯನ್ನು ಬೆಳೆಸಿಕೊಂಡು ಸದಭಿಮಾನಿಯಾಗಿ ಬಾಳಿದರೆ ಅದು ಬಾಳು, ಇಲ್ಲದಿದ್ದರೆ ಬರೀ ಗೋಳು ಎಂಬುದನ್ನು ಸಾದರಪಡಿಸುತ್ತದೆ. ●

---

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

826 ಶ್ರೀ ಎನ್. ರಾಂಬಸಪ್ಪ.
ಮರ್ಚೆಂಟ್, ಕಾರಹಳ್ಳಿ.
ದೇವನಹಳ್ಳಿ ತಾ||
ಬೆಂಗಳೂರು ಜಿಲ್ಲೆ

827 ಸಿ. ಮುನಿರಾಜು.
S/o ಅಕ್ಕಯಮ್ಮ. ಗೌಡರ ಸ್ಟ್ರೀಟ್
ದೇವನಹಳ್ಳಿ.
ಬೆಂಗಳೂರು ಜಿಲ್ಲೆ.

828 ಶ್ರೀ ಬಿ.ವಿ. ಕೃಷ್ಣಮೂರ್ತಿ.
ಮ್ಯಾನೇಜರ್.
ವೆಂಕಟೇಶ್ವರ ಥಿಯೇಟರ್
ದೇವನಹಳ್ಳಿ.
ಬೆಂಗಳೂರು ಜಿಲ್ಲೆ.

829 ಎನ್. ಟಿ. ನಂಜಪ್ಪ
ವಿಬಸಾಪುರ.
||ತಾ||
ಜಿಲ್ಲೆ.

(ಮುಂದುವರಿಯುತ್ತದೆ.)

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under No. 17139/69
Siddaganga Monthly Magazine Siddaganga Mutt.
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.